KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಏಪ್ರಿಲ್ ೨೩, ೨೦೦೯ (ವೈಶಾಖ ೩, ಶಕ ವರ್ಷ ೧೯೩೧) | ಸಂಚಿಕೆ ೧೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** 2008–09ನೇ ಸಾಲಿನ ಗಂಗಾ ಕಲ್ಯಾಣ ಯೋಜನೆಯಡಿ ನೀರಾವರಿ ಕೊಳವೆಬಾವಿಗಳನ್ನು ಕೊರೆದು, ಪಂಪ್‌ಸೆಟ್ ಅಳವಡಿಸಿ, ವಿದ್ಯುದ್ದೀಕರಣಗೊಳಿಸುವ ಬಗ್ಗೆ ಟೆಂಡರ್ ಕರೆಯುವ ಕುರಿತು.

**ಓದಲಾಗಿದೆ:**
1. ವ್ಯವಸ್ಥಾಪಕ ನಿರ್ದೇಶಕರು, ಡಾ:ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ, ಬೆಂಗಳೂರು ಇವರ ಪತ್ರ ಸಂಖ್ಯೆ ಡಾ.ಬಿ.ಆರ್. ಅಂಅನಿ, ಗಂಕಯೋ ಟೆಂಡರ್ 2008–09/ 11718 ದಿನಾಂಕ: 23.10.2008.
2. ಸರ್ಕಾರಿ ಆದೇಶ ಸಂಖ್ಯೆ ಸಕಇ 64 ಎಸ್‌ಡಿಸಿ 06 ದಿನಾಂಕ: 22/08/2006.

**ಪ್ರಸ್ತಾವನೆ:**

ಮೇಲೆ ಓದಲಾದ 2ರ ಸರ್ಕಾರಿ ಆದೇಶದಲ್ಲಿ ಗಂಗಾ ಕಲ್ಯಾಣ ಯೋಜನೆಯಡಿ ಕೊಳವೆ ಬಾವಿಗಳನ್ನು ಕೊರೆಯಲು 2006–07ನೇ ಸಾಲಿನಿಂದ ಜಾರಿಗೆ ಬರುವಂತೆ ಪ್ರತ್ಯೇಕವಾಗಿ ಜಿಲ್ಲಾ ಮಟ್ಟದಲ್ಲಿ ಟೆಂಡರ್‌ಗಳನ್ನು ಆಯಾ ಜಿಲ್ಲಾಧಿಕಾರಿಗಳು ಟೆಂಡರ್ ಆಹ್ವಾನಿಸುವ ಪ್ರಾಧಿಕಾರಿಯಾಗಿ ಹಾಗೂ ಅವರ ಅಧ್ಯಕ್ಷತೆಯಲ್ಲಿ ರಚಿಸಲಾದ ಟೆಂಡರ್ ಪರಿಶೀಲನಾ ಸಮಿತಿ ಮೌಲ್ಯಮಾಪನ ಮಾಡಿ ಸಂಬಂಧ ಪಟ್ಟ ವ್ಯವಸ್ಥಾಪಕ ನಿರ್ದೇಶಕರಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ ಮತ್ತು ನಿಯಮಗಳ ಅಡಿ ಅಂಗೀಕರಿಸಿ ಅಂತಿಮಗೊಳಿಸಲು ಆದೇಶಿಸಲಾಗಿದೆ.

ದಿನಾಂಕ: 02.07.2007 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಉನ್ನತ ಮಟ್ಟದ ಸಮಿತಿಯ ಸಭೆಯಲ್ಲಿ 2007–08 ಸಾಲಿನ ಗುರಿಯಂತೆ 4 ನಿಗಮಗಳ ಪರವಾಗಿ ಸಂಬಂಧಿಸಿದ ಜಿಲ್ಲಾಧಿಕಾರಿಗಳ ಮುಖಾಂತರ ಟೆಂಡರ್‌ಗಳನ್ನು ಆಹ್ವಾನಿಸಿ ಮತ್ತು ಪರಿಶೀಲನಾ ಸಮಿತಿಯ ಮುಖಾಂತರ ಟೆಂಡರ್‌ಗಳನ್ನು ತೆರೆದು ಪರಿಶೀಲಿಸಿ ಡಾ.ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದ ವ್ಯವಸ್ಥಾಪಕರ ನಿರ್ದೇಶಕರ ನೇತೃತ್ವದಲ್ಲಿ ಉಳಿದ 3 ನಿಗಮದ ವ್ಯವಸ್ಥಾಪಕ ನಿರ್ದೇಶಕರುಗಳ ಸಮಿತಿ ಮೂಲಕ ದರ ನಿಷ್ಕರ್ಶಿಸಿ ಕಾರ್ಯನಿರ್ವಹಿಸಲು ತೀರ್ಮಾನಿಸಲಾಗಿತ್ತು.

2008–09ನೇ ಸಾಲಿನಿಂದ ಗಂಗಾ ಕಲ್ಯಾಣ ಯೋಜನೆಯಡಿ ನೀರಾವರಿ ಕೊಳವೆ ಬಾವಿಗಳನ್ನು ಕೊರೆದು, ಪಂಪ್‌ಸೆಟ್ ಅಳವಡಿಸಿ, ವಿದುದ್ದೀಕರಣಗೊಳಿಸುವ ಬಗ್ಗೆ ಟೆಂಡರ್‌ಗಳನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿನ ಸಮಿತಿಯ ನೇತೃತ್ವದಲ್ಲಿ ಟೆಂಡರ್ ಕರೆದು ಅಂತಿಮಗೊಳಿಸಲು ಸರ್ಕಾರವು ಪರಿಶೀಲಿಸಿದೆ. ಅಂತೆಯೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಕಇ 43 ಎಸ್‌ಡಿಸಿ 2008, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2008**

2008–09ನೇ ಸಾಲಿನಿಂದ ಗಂಗಾ ಕಲ್ಯಾಣ ಯೋಜನೆಯನ್ನು ಅನುಷ್ಠಾನಗೊಳಿಸಲು ಡಾ. ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ, ಕರ್ನಾಟಕ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ಮತ್ತು ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ

ಅಭಿವೃದ್ಧಿ ನಿಗಮಗಳ ಪರವಾಗಿ ಕೊಳವೆಬಾವಿ ಕೊರೆದು, ಕೇಸಿಂಗ್ ಪೈಪ್ ಅಳವಡಿಸಲು, ಸಬ್‌ಮರ್ಸಿಬಲ್ ಪಂಪ್‌ಸೆಟ್ ಹಾಗೂ ಪೂರಕ ಸಾಮಗ್ರಿಗಳನ್ನು ಸರಬರಾಜು ಮಾಡಲು, ಪಂಪ್‌ಸೆಟ್‌ಗಳನ್ನು ಕೊಳವೆಬಾವಿಗೆ ಅಳವಡಿಸಿ, ವಿದ್ಯುದ್ದೀಕರಣಗೊಳಿಸಲು ಟೆಂಡರ್‌ಗಳನ್ನು ಕೆ.ಟಿ.ಪಿ.ಪಿ. ಅಧಿನಿಯಮ 1999 ಮತ್ತು ನಿಯಮ 2000 ರನ್ವಯ ಜಿಲ್ಲಾ ಮಟ್ಟದಲ್ಲಿ ಕರೆದು ಅಂತಿಮಗೊಳಿಸಲು ಈ ಕೆಳಕಂಡಂತೆ ಟೆಂಡರ್ ಆಹ್ವಾನಿಸುವ ಪ್ರಾಧಿಕಾರ, ಟೆಂಡರ್ ಅಂಗೀಕರಿಸುವ ಪ್ರಾಧಿಕಾರ ಮತ್ತು ಟೆಂಡರ್ ಪರಿಶೀಲನಾ ಸಮಿತಿಯನ್ನು ರಚಿಸಲಾಗಿದೆ.

**ಟೆಂಡರ್ ಆಹ್ವಾನಿಸುವ ಪ್ರಾಧಿಕಾರ**

1. ಜಿಲ್ಲಾಧಿಕಾರಿಗಳು, – ಅಧ್ಯಕ್ಷರು
2. ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ – ಸಹ ಅಧ್ಯಕ್ಷರು
3. ಕಾರ್ಯಪಾಲಕ ಅಭಿಯಂತರರು ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ (ಜಿಲ್ಲಾ ಕೇಂದ್ರ ಸ್ಥಾನದಲ್ಲಿರುವ ಅಧಿಕಾರಿ) – ಸದಸ್ಯರು
4. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಸಮಾಜ ಕಲ್ಯಾಣ ಇಲಾಖೆ – ಸದಸ್ಯರು
5. ಜಿಲ್ಲಾ ವ್ಯವಸ್ಥಾಪಕರು, ಡಿ. ದೇವರಾಜ ಅರಸ್ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ / ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ – ಸದಸ್ಯರು
6. ಜಿಲ್ಲಾ ವ್ಯವಸ್ಥಾಪಕರು, ಡಾ. ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ/– ಕರ್ನಾಟಕ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ – ಸದಸ್ಯ ಕಾರ್ಯದರ್ಶಿ

**ಟೆಂಡರ್ ಅಂಗೀಕರಿಸುವ ಪ್ರಾಧಿಕಾರ:**

1. ವ್ಯವಸ್ಥಾಪಕ ನಿರ್ದೇಶಕರು ಡಾ. ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ, ಬೆಂಗಳೂರು – ಅಧ್ಯಕ್ಷರು
2. ಉಪ ಕಾರ್ಯದರ್ಶಿಗಳು ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು – ಸಹ ಅಧ್ಯಕ್ಷರು
3. ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ, ಬೆಂಗಳೂರು – ಸದಸ್ಯರು
4. ವ್ಯವಸ್ಥಾಪಕ ನಿರ್ದೇಶಕರು ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಬೆಂಗಳೂರು – ಸದಸ್ಯರು
5. ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ, ಬೆಂಗಳೂರು – ಸದಸ್ಯರು

**ಟೆಂಡರ್ ಪರಿಶೀಲನಾ ಸಮಿತಿ:**

1. ಜಿಲ್ಲಾಧಿಕಾರಿಗಳು, – ಅಧ್ಯಕ್ಷರು
2. ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ – ಸಹ ಅಧ್ಯಕ್ಷರು
3. ಕಾರ್ಯಪಾಲಕ ಅಭಿಯಂತರರು ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ (ಜಿಲ್ಲಾ ಕೇಂದ್ರ ಸ್ಥಾನದಲ್ಲಿರುವ ಅಧಿಕಾರಿ) – ಸದಸ್ಯರು
4. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಸಮಾಜ ಕಲ್ಯಾಣ ಇಲಾಖೆ – ಸದಸ್ಯರು
5. ಜಿಲ್ಲಾ ವ್ಯವಸ್ಥಾಪಕರು, ಡಿ. ದೇವರಾಜ ಅರಸ್ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ / ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ – ಸದಸ್ಯರು

6. ಜಿಲ್ಲಾ ವ್ಯವಸ್ಥಾಪಕರು, – ಸದಸ್ಯ ಕಾರ್ಯದರ್ಶಿ
ಡಾ. ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ/–
ಕರ್ನಾಟಕ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ

ಟೆಂಡರ್‌ನಲ್ಲಿ ಭಾಗವಹಿಸಲು ಇರಬೇಕಾದ ಅರ್ಹತೆ, ಟೆಂಡರ್‌ನಲ್ಲಿ ನಿರ್ವಹಿಸಬೇಕಾದ ಕಾಮಗಾರಿಗಳು ಮತ್ತು ಅದಕ್ಕೆ ಸಂಬಂಧಿಸಿದ ವಿಶಿಷ್ಟತೆಗಳು (Specifications) ಟೆಂಡರ್ ನಿಬಂಧನೆ ಮತ್ತು ಷರತ್ತುಗಳು ಮತ್ತು ಹಣ ಪಾವತಿ ವಿಧಾನ ಕುರಿತಂತೆ ವ್ಯವಸ್ಥಾಪಕ ನಿರ್ದೇಶಕರು ಡಾ:ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮರವರು ನಿಯಮಾವಳಿಗಳನ್ನು ರಚಿಸಿ ಜಿಲ್ಲಾಧಿಕಾರಿಗಳಿಗೆ ಮತ್ತು ನಿಗಮಗಳ ಜಿಲ್ಲಾ ವ್ಯವಸ್ಥಾಪಕರುಗಳಿಗೆ ನೀಡತಕ್ಕದ್ದು.

ಈ ಕೆಳಕಂಡ ಹೆಚ್ಚುವರಿ ಸೂಚನೆಗಳನ್ನು ನೀಡಲಾಗಿದೆ.

A. 100% inspection by 3rd Agency be made compulsory, payment shall be made only after that.
B. For energisation also tenders can be called separately as percentage plus and minus on estimate made by Escoms. It will have to be paid by Escoms and will be in separate schedule.
C. Validity of tenders can be 18 months instead of 12 months. To be further extendable by six months on mutual consent by both sides.
D. Payment is decentralized and Deputy Commissioners is authorized to pay.
E. Restrictions of two districts for one bidder be extended to 5 districts.
F. A price variation be allowed on steel as per IEEMA formula after 12 months.
G. Ten percent performance guarantee (Bank guarantee) be given by successful bidder.
H. PERT chart would be given by the bidder giving performance schedule.

ಕರಾರು ಉಲ್ಲಂಘನೆ ಅಂದರೆ ಗುಣಮಟ್ಟ ವೈಫಲ್ಯ, ನೀಡಿದ ಗುರಿಯನ್ನು ನಿಗದಿತ ಅವಧಿಯಲ್ಲಿ ಸಾಧಿಸಲು ವಿಫಲತೆ, ಅನಗತ್ಯ ವಿಳಂಬ ಇತ್ಯಾದಿ ಲೋಪಗಳಿಗೆ ಸಂಬಂಧಿತ ಗುತ್ತಿಗೆದಾರರನ್ನು ಕಪ್ಪು ಪಟ್ಟಿಗೆ ಸೇರಿಸುವುದು ಹಾಗೂ ತೀವ್ರ ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಂ. ಚಿದಾನಂದಸ್ವಾಮಿ**
ಪಿ.ಆರ್. 82 ಸರ್ಕಾರದ ಅಧೀನ ಕಾರ್ಯದರ್ಶಿ–1, ಸಮಾಜ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಉಮೇಶ್ ಕುಸುಗಲ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಶ್ರೀ ಕೆ.ಪಿ. ಚಂದ್ರಹಾಸ್, ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಮತ್ತು ಶ್ರೀ ಪ್ರಕಾಶ್ ಛಲವಾದಿ, ಸಹಾಯಕ ನಿರ್ದೇಶಕರು ಇವರುಗಳ ಇಲಾಖಾ ವಿಚಾರಣೆ – ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 14 ಎಸ್‌ಇಎನ್ 06 ದಿ: 15.02.2007.
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿ.ಪಂ. ರಾಯಚೂರು ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ: 17.07.08 ರ ವಿಚಾರಣಾ ವರದಿ ಸಂಖ್ಯೆ: ಜಿಪರಾ/ಸಿಸಿಎ/03/2007–08/2254.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ, ಶ್ರೀ ಉಮೇಶ್ ಕುಸುಗಲ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ, ರಾಯಚೂರು ಜಿಲ್ಲಾ ಪಂಚಾಯತ್ ಅಂದಿನ ಉಪ ಕಾರ್ಯದರ್ಶಿ ಹಾಗೂ ಚುನಾವಣಾಧಿಕಾರಿ, ಶ್ರೀ ಕೆ.ಪಿ.ಚಂದ್ರಹಾಸ, ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಹಿಂದಿನ ತಹಶೀಲ್ದಾರ್, ಸಿಂಧನೂರು ಮತ್ತು ಸಹಾಯಕ ಚುನಾವಣಾಧಿಕಾರಿ ಹಾಗೂ ಶ್ರೀ ಪ್ರಕಾಶ್ ಛಲವಾದಿ, ಸಹಾಯಕ ನಿರ್ದೇಶಕರು ಇವರು ಎಣಿಕೆ ಸಹಾಯಕ ಚುನಾವಣಾಧಿಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಡಿಸೆಂಬರ್ 2005 ರಲ್ಲಿ ಜರುಗಿದ ಜಿಲ್ಲಾ/ತಾಲ್ಲೂಕು ಪಂಚಾಯಿತಿ ಚುನಾವಣೆಯಲ್ಲಿ ರಾಯಚೂರು ಜಿಲ್ಲೆ ಸಿಂಧನೂರು ತಾಲ್ಲೂಕಿನ ರಾಗಲಪರ್ವಿ ಜಿಲ್ಲಾ ಪಂಚಾಯತ್ ಕ್ಷೇತ್ರದ ಮತ ಎಣಿಕೆಯಲ್ಲಿ ಸೋತ ಅಭ್ಯರ್ಥಿಯು ಆಯ್ಕೆಯಾಗಿರುವರೆಂದು ಚುನಾವಣಾ ಪತ್ರ ನೀಡಿ ನಂತರ ಅದನ್ನು ರದ್ದುಪಡಿಸಿ ಶ್ರೀಮತಿ ಗಂಗಮ್ಮ, ಕಾಂಗ್ರೆಸ್ ಅಭ್ಯರ್ಥಿ ಅವರು ಆಯ್ಕೆಯಾಗಿರುವರೆಂದು ಘೋಷಿಸಿ ಕರ್ತವ್ಯಲೋಪ ಎಸಗಿದ ಆರೋಪಗಳಿಗಾಗಿ ಸದರಿ ಅಧಿಕಾರಿ/ನೌಕರರುಗಳಿಗೆ ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗುವ ಮೂಲಕ ಎಸಗಿದ ದುರ್ನಡತೆಯ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ಸಲುವಾಗಿ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ

(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 13ನ್ನು ಓದಿಕೊಂಡಂತೆ ನಿಯಮ 11 (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ರಾಯಚೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ವಿಚಾರಣಾಧಿಕಾರಿಗಳು ವರದಿ ಸಲ್ಲಿಸಿ, ಶ್ರೀ ಉಮೇಶ್ ಕುಸುಗಲ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಅಂದಿನ ಉಪ ಕಾರ್ಯದರ್ಶಿ ಜಿಲ್ಲಾ ಪಂಚಾಯತ್ ರಾಯಚೂರು ಹಾಗೂ ಚುನಾವಣಾಧಿಕಾರಿ, ಶ್ರೀ ಕೆ.ಪಿ. ಚಂದ್ರಹಾಸ್, ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಅಂದಿನ ತಹಶೀಲ್ದಾರ್, ಸಿಂಧನೂರು ಮತ್ತು ಸಹಾಯಕ ಚುನಾವಣಾಧಿಕಾರಿ ಹಾಗೂ ಶ್ರೀ ಪ್ರಕಾಶ್ ಛಲವಾದಿ, ಸಹಾಯಕ ನಿರ್ದೇಶಕರು ಎಣಿಕೆ ಸಹಾಯಕ ಚುನಾವಣಾಧಿಕಾರಿ ಇವರ ವಿರುದ್ಧದ ಆರೋಪಗಳು ಭಾಗಶಃ ಸಾಬೀತಾಗಿದೆ ಎಂದು ವರದಿ ನೀಡಿರುತ್ತಾರೆ. ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ವರದಿಯನ್ನು ಒಪ್ಪಿಕೊಂಡು ಆರೋಪಿತ ಅಧಿಕಾರಿ/ನೌಕರರಿಗೆ ಎರಡನೇ ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಲಾಯಿತು. ಶ್ರೀ ಉಮೇಶ್ ಕುಸುಗಲ್, ಕೆ.ಎ.ಎಸ್. ಮತ್ತು ಶ್ರೀ ಕೆ.ಪಿ.ಚಂದ್ರಹಾಸ್ ರವರು ಉತ್ತರ ನೀಡಿ, ಇದರಲ್ಲಿ ತಾವು ತಪ್ಪು ಕಂಡ ತಕ್ಷಣ ಅದನ್ನು ಸರಿಪಡಿಸಿ ಫಲಿತಾಂಶ ಘೋಷಿಸಿರುವುದರಿಂದ ತಮ್ಮನ್ನು ಆರೋಪ ಮುಕ್ತಗೊಳಿಸಲು ಕೋರಿರುತ್ತಾರೆ. ಶ್ರೀ ಪ್ರಕಾಶ್ ಛಲವಾದಿ ರವರು ಉತ್ತರ ನೀಡಿರುವುದಿಲ್ಲ. ಇದನ್ನು ಸರ್ಕಾರವು ಪರಿಶೀಲಿಸಿ ಈ ಆರೋಪಿತರು ಎಸಗಿರುವ ಆರೋಪದಿಂದ ಚುನಾವಣಾ ಫಲಿತಾಂಶದ ಮೇಲೆ ಯಾವುದೇ ಪರಿಣಾಮ ಬೀರಿರುವುದಿಲ್ಲ. ಹಾಗೂ ಉಚ್ಚ ನ್ಯಾಯಾಲಯದಲ್ಲೂ ಸಹ ಈ ವಿಷಯದ ಬಗ್ಗೆ ಆರೋಪಿತರ ವಿರುದ್ಧ ಯಾವುದೇ ನಿರ್ದೇಶನ ಇರುವುದಿಲ್ಲ. ಹಾಗೂ ಇದು ಲಂಚದ ಪ್ರಕರಣವಾಗಲೀ ಅಥವಾ ನೈತಿಕತೆಗಳಿಗೆ ಸಂಬಂಧಪಟ್ಟ ಆರೋಪವಾಗಿರುವ ಕಾರಣ, ವಿಚಾರಣಾ ವರದಿಯನ್ನು ಅಂಗೀಕರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಎಸ್‌ಇಎನ್ 06 (ಸಿಆಸುಇ 30 ಕೆಇವಿ 07) ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 (ii) ರ ಪ್ರಕಾರ, ಶ್ರೀ ಉಮೇಶ್ ಕುಸುಗಲ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಹಾಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್, ಬೀದರ್, ಶ್ರೀ ಕೆ.ಪಿ. ಚಂದ್ರಹಾಸ್, ಶಾಖಾಧಿಕಾರಿ, ಗ್ರಾ.ಅ.ಮತ್ತು ಪಂ.ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಹಾಗೂ ಶ್ರೀ ಪ್ರಕಾಶ್ ಛಲವಾದಿ, ಸಹಾಯಕ ನಿರ್ದೇಶಕರು, ಅಕ್ಷರ ದಾಸೋಹ, ಸಿಂಧನೂರು ಇವರಿಗೆ ವಾಗ್ದಂಡನೆ (censure)ನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

ಪಿ.ಆರ್. 196

## ಸಹಕಾರ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಸಿಒ 230 ಸಿಎಲ್‌ಎಂ 2008, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2008**

**ವಿಷಯ:** ಸಹಕಾರಿ ಸಂಘಗಳ ಆಡಳಿತ ಸಮಿತಿ ಸದಸ್ಯರುಗಳು/ಅಧಿಕಾರಿಗಳು / ಸಿಬ್ಬಂದಿ ವರ್ಗದವರು ವಿದೇಶ ಪ್ರವಾಸ ಕೈಗೊಳ್ಳುವ ಬಗ್ಗೆ.

ಇತ್ತೀಚೆಗೆ ರಾಜ್ಯದ ಅನೇಕ ಸಹಕಾರಿ ಸಂಘಗಳಿಂದ ವಿದೇಶಗಳಲ್ಲಿ ಇರುವ ಸಹಕಾರಿ ಸಂಸ್ಥೆಗಳಿಗೆ ಭೇಟಿ ನೀಡಿ ಅಧ್ಯಯನ ನಡೆಸಲು / ಸಭೆ ಸಮಾರಂಭ / ಸಮ್ಮೇಳನಗಳಿಗೆ ಹಾಜರಾಗಲು ಅನುಮತಿ ಕೋರಿ ಪ್ರಸ್ತಾವಗಳು ಬರುತ್ತಿವೆ. ವಿದೇಶಗಳಲ್ಲಿ ಸಹಕಾರಿ ಕ್ಷೇತ್ರದ ಅಧ್ಯಯನ ನಡೆಸಿ ಅಲ್ಲಿನ ಯಶಸ್ವಿ ಅನುಭವಗಳನ್ನು ರಾಜ್ಯದ ಸಹಕಾರಿ ಸಂಸ್ಥೆಗಳ ಬೆಳವಣಿಗೆಗೆ ಅಳವಡಿಸಿಕೊಳ್ಳುವ ಬಗ್ಗೆ ಪರಿಗಣಿಸುವುದು ಅಪೇಕ್ಷಣೀಯ. ಅಂತಹ ವಿದೇಶ ಪ್ರವಾಸಗಳನ್ನು ಪ್ರಾಯೋಜಿಸುವ ಸಹಕಾರಿ ಸಂಸ್ಥೆಗಳ ಆರ್ಥಿಕ ಪರಿಸ್ಥಿತಿಯು ಅನುಕೂಲಕರವಾಗಿರಬೇಕೆಂಬುದನ್ನು ಒತ್ತಿ ಹೇಳುವ ಅಗತ್ಯತೆ ಇರುವುದಿಲ್ಲ. ಆದುದರಿಂದ, ಸಹಕಾರಿ ಸಂಸ್ಥೆಗಳ ಆಡಳಿತ ಸಮಿತಿ ಸದಸ್ಯರುಗಳು / ಅಧಿಕಾರಿಗಳು / ಸಿಬ್ಬಂದಿವರ್ಗದವರು ವಿದೇಶ ಪ್ರವಾಸ ಕೈಗೊಳ್ಳುವ ಸಂಬಂಧದಲ್ಲಿ ಕೆಳಕಂಡ ಸೂಚನೆಗಳನ್ನು ನೀಡಲಾಗಿದೆ.

1. ಯಾವುದೇ ಸಹಕಾರ ಸಂಸ್ಥೆಯ ಆಡಳಿತ ಸಮಿತಿಯ ಸದಸ್ಯರು / ಅಧಿಕಾರಿಗಳು / ಸಿಬ್ಬಂದಿವರ್ಗದವರು ವಿದೇಶ ಪ್ರವಾಸ ಕೈಗೊಳ್ಳಬೇಕಾದಲ್ಲಿ ಸರ್ಕರದ ಪೂರ್ವಾನುಮತಿ ಪಡೆಯತಕ್ಕದ್ದು. ಆದರೆ, ಈ ಬಗ್ಗೆ ಯಾವುದೇ ಕಾರಣಕ್ಕೂ ಘಟನೋತ್ತರ ಅನುಮತಿಯನ್ನು ನೀಡಲಾಗುವುದಿಲ್ಲ.
2. ಅಧ್ಯಯನ ಪ್ರವಾಸ / ವಿದೇಶ ಪ್ರವಾಸ ಕೈಕೊಳ್ಳುವ ಸಹಕಾರ ಸಂಘಗಳು ಸತತ ಐದು ವರ್ಷ ಲಾಭದಲ್ಲಿರಬೇಕು, ಸಂಚಿತ ನಷ್ಟದಲ್ಲಿರತಕ್ಕದ್ದಲ್ಲ. ವಿದೇಶ ಪ್ರವಾಸಕ್ಕೆ ತಗಲುವ ವೆಚ್ಚವನ್ನು ದುಡಿಯುವ ಬಂಡವಾಳದಿಂದ ಭರಿಸತಕ್ಕದ್ದಲ್ಲ. ಪರಂತು, ಅದಕ್ಕಾಗಿ ತೆಗೆದಿರಿಸಲಾದ ನಿಧಿಯಿಂದ ಭರಿಸತಕ್ಕದ್ದು.

3. ಯಾವುದೇ ವರ್ಷದಲ್ಲಿ ವಿದೇಶ ಪ್ರವಾಸಗಳನ್ನು ಕೈಕೊಳ್ಳುವ ನಿರ್ದೇಶಕರ ಹಾಗೂ ಅಧಿಕಾರಿಗಳ ಸಂಖ್ಯೆಯು ಯಾವುದೇ ಕಾರಣಕ್ಕೂ 20ಕ್ಕಿಂತ ಹೆಚ್ಚು ಮೀರತಕ್ಕದ್ದಲ್ಲ. ಆಯ್ಕೆಯಾದವರ ಹೆಸರು, ವಿಳಾಸ, ವಯಸ್ಸು ಮತ್ತು ಸಹಕಾರ ಕ್ಷೇತ್ರದಲ್ಲಿ ಅನುಭವ ಮತ್ತು ಇತ್ಯಾದಿ ವಿವರಗಳನ್ನು ಲಗತ್ತಿಸಿದ ನಮೂನೆ–1 & 2ರಲ್ಲಿ ಸಲ್ಲಿಸತಕ್ಕದ್ದು.
4. ಹೊರದೇಶಗಳಲ್ಲಿ ತರಬೇತಿ / ಕಾರ್ಯಾಗಾರ / ಸಮ್ಮೇಳನ / ಅಧ್ಯಯನ ಪ್ರವಾಸಕ್ಕಾಗಿ ಆಯಾ ಹೊರದೇಶಗಳಿಂದ ಕಡ್ಡಾಯವಾಗಿ ಆಮಂತ್ರಣ ಇರತಕ್ಕದ್ದು. ಒಂದೇ ಸಂಸ್ಥೆಯ ಬಹುತೇಕ ಆಡಳಿತ ಸಮಿತಿ ಸದಸ್ಯರನ್ನು / ಹಲವು ಸಹಕಾರ ಸಂಘಗಳ ಆಡಳಿತ ಸಮಿತಿ ಸದಸ್ಯರನ್ನು ಆಯಾ ಆಡಳಿತ ಸಮಿತಿಗಳು ಆಯ್ಕೆ ಮಾಡಿ ಸಹಕಾರ ಸಂಘಗಳ ನಿಬಂಧಕರ ಮೂಲಕ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಪ್ರಸ್ತಾಪಿತ ವಿದೇಶ ಪ್ರವಾಸದ ಅವಧಿಯ ಶೇಕಡಾ 75 ರಷ್ಟು ಅವಧಿಯನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಭೇಟಿ ಕೊಡಲು ವಿನಿಯೋಗಿಸತಕ್ಕದ್ದು ಮತ್ತು ವಿದೇಶ ಪ್ರವಾಸದಿಂದ ಹಿಂತಿರುಗಿದ ನಂತರ ಅಧ್ಯಯನ ಪ್ರವಾಸದ ವರದಿಯನ್ನು ಸಲ್ಲಿಸತಕ್ಕದ್ದು.
6. ಒಂದು ಸಾರಿ ಹೊರದೇಶಗಳಿಗೆ ಪ್ರವಾಸ ಕೈಕೊಂಡವರನ್ನು ಎರಡು ವರ್ಷಗಳವರೆಗೆ ಪುನಃ ಆಯ್ಕೆ ಮಾಡತಕ್ಕದ್ದಲ್ಲ. ಆದರೆ, ರಾಜ್ಯಮಟ್ಟದ ಸಹಕಾರ ಸಂಘಗಳ ಪದಾಧಿಕಾರಿಗಳಾಗಿದ್ದಲ್ಲಿ ಒಂದು ವರ್ಷದ ನಂತರ ಪುನಃ ಆಯ್ಕೆ ಮಾಡಬಹುದು. ವಿದೇಶಿ ಸಂಸ್ಥೆಗಳ ಆಹ್ವಾನದ ಮೇರೆಗೆ ಅಧಿಕೃತ ಸಭೆ / ಸಮ್ಮೇಳನಗಳಿಗೆ ಹಾಜರಾಗುವ ನಿರ್ದೇಶಕರಿಗೆ / ಅಧಿಕಾರಿಗಳಿಗೆ ಈ ನಿರ್ಬಂಧ ಅನ್ವಯಿಸುವುದಿಲ್ಲ.
7. ಆಡಳಿತ ಸಮಿತಿಯ ಪದಾವಧಿಯ ಮುಕ್ತಾಯದ ಪೂರ್ವದ ಆರು ತಿಂಗಳೊಳಗೆ ವಿದೇಶ ಪ್ರವಾಸ ಕೈಗೊಳ್ಳತಕ್ಕದ್ದಲ್ಲ.
8. ಇಂತಹ ಪ್ರವಾಸದ ಅವಧಿಯು ಯಾವುದೇ ಕಾರಣಕ್ಕೂ ಮಂಜೂರಾದ ಪ್ರವಾಸದ ಅವಧಿಯನ್ನು ಮೀರತಕ್ಕದ್ದಲ್ಲ.

ವಿದೇಶ ಪ್ರವಾಸಕ್ಕೆ ಅನುಮತಿ ಕೋರಿ (ನಮೂನೆ 1 & 2ರಲ್ಲಿ ಮಾಹಿತಿಯನ್ನೊಳಗೊಂಡ) ಪ್ರಸ್ತಾವಗಳನ್ನು ಸಹಕಾರಿ ಸಂಸ್ಥೆಗಳು ಸಹಕಾರ ಸಂಘಗಳ ನಿಬಂಧಕರ ಮೂಲಕ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಸದರಿ ಪ್ರಸ್ತಾವಗಳಲ್ಲಿ ಕೆಳಕಂಡ ಮಾಹಿತಿ ಇರತಕ್ಕದ್ದು.

1. ಸಹಕಾರ ಸಂಘಗಳ ಯಶಸ್ವಿ ಕಾರ್ಯನಿರ್ವಹಣೆಯ ಬಗ್ಗೆ ಸಂಕ್ಷಿಪ್ತ ವರದಿ.
2. ಸಹಕಾರ ಸಂಘಗಳ ಆರ್ಥಿಕ ಪರಿಸ್ಥಿತಿಯ ವಿವರಣೆ. ಇತ್ತೀಚಿನ ಆಡಿಟ್ ಆದ ಆಸ್ತಿ–ಹೊಣೆ ಪಟ್ಟಿಯನ್ನು ಲಗತ್ತಿಸತಕ್ಕದ್ದು.
3. ಪ್ರಸ್ತಾಪಿತ ವಿದೇಶ ಪ್ರವಾಸಕ್ಕೆ ಆಡಳಿತ ಸಮಿತಿಗಳ / ಮಹಾಸಭೆಗಳ ನಿರ್ಣಯಗಳು
4. ಪ್ರಸ್ತಾಪಿತ ವಿದೇಶ ಪ್ರವಾಸದ ಉದ್ದೇಶಗಳು ಮತ್ತು ಅವುಗಳಿಂದಾಗುವ ಪ್ರಯೋಜನಗಳನ್ನು ಒಳಗೊಂಡಂತೆ ಸಮರ್ಥನೆ
5. ತರಬೇತಿ / ಕಾರ್ಯಾಗಾರ / ಸಮ್ಮೇಳನ / ಅಧ್ಯಯನಕ್ಕಾಗಿ ಆಹ್ವಾನ ನೀಡುವ ವಿದೇಶಿ ಸಂಸ್ಥೆಯ ಆಮಂತ್ರಣ ಪತ್ರಿಕೆ / ಪತ್ರವನ್ನು ಲಗತ್ತಿಸತಕ್ಕದ್ದು.
6. ಪ್ರಸ್ತಾಪಿತ ವಿದೇಶ ಪ್ರವಾಸಕ್ಕೆ ತಗಲುವ ವೆಚ್ಚ ಮತ್ತು ಅದನ್ನು ಹೇಗೆ ಭರಿಸಲಾಗುವುದು?

ಮೇಲಿನ ಸೂಚನೆಗಳನ್ನು ಸಹಕಾರಿ ಸಂಸ್ಥೆಗಳು ಪಾಲಿಸುವಂತೆ ಇಲಾಖಾಧಿಕಾರಿಗಳು ನೋಡಿಕೊಳ್ಳತಕ್ಕದ್ದು.

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ನಮೂನೆ–1

### ವಿದೇಶ ಪ್ರವಾಸ ಕೈಗೊಳ್ಳಲಿರುವ ವ್ಯಕ್ತಿಯ ವ್ಯಕ್ತಿಗತ ವಿವರ

| ಹೆಸರು & ವಿಳಾಸ | ಪದನಾಮ/ ಉದ್ಯೋಗ | ಜನ್ಮ ದಿನಾಂಕ & ವಯಸ್ಸು | ವಿದೇಶ ಪ್ರವಾಸ ಪ್ರಾಯೋಜಿಸಿರುವ ಸಂಘದಲ್ಲಿ ಸದಸ್ಯರಾಗಿರುವ ವಿವರಗಳು | ಇತರ ಯಾವುದೇ ಸಹಕಾರ ಸಂಘದ ಸದಸ್ಯರಾಗಿದ್ದರೆ ಅದರ ಹೆಸರು ಮತ್ತು ಸದಸ್ಯತ್ವ | ಯಾವುದಾದರೂ ಸಹಕಾರ ಸಂಘಕ್ಕೆ ಸುಸ್ತಿದಾರ ರಾಗಿದ್ದಾರೆಯೇ? ಇದ್ದಲ್ಲಿ ಅದರ ವಿವರಗಳು (ಸಂಘದ ಹೆಸರು ಮತ್ತು ಮೊಬಲಗು) | ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಅಡಿ ಯಾವುದೇ ಅನರ್ಹತೆಯನ್ನು ಹೊಂದಿದ್ದಾರೆಯೇ? ಹೊಂದಿದ್ದಲ್ಲಿ ವಿವರಗಳು | ಯಾವುದಾದರೂ ಸಹಕಾರ ಸಂಘದಲ್ಲಿ ಅವ್ಯವಹಾರ ನಡೆಸಿದ ಬಗ್ಗೆ ಯಾವುದೇ ಕ್ರಿಮಿನಲ್ ಮೊಕದ್ದಮೆ ದಾಖಲಾಗಿದೆಯೇ? ಇದ್ದಲ್ಲಿ ವಿವರಗಳು | ಈ ಹಿಂದೆ ಯಾವುದಾದರೂ ವಿದೇಶ ಪ್ರವಾಸ ಕೈಗೊಳ್ಳಲಾಗಿದೆಯೇ? ಇದ್ದಲ್ಲಿ ಪ್ರವಾಸದ ಅವಧಿ & ಭೇಟಿ ಕೊಟ್ಟ ದೇಶಗಳು (ಯಾವ ಸಹಕಾರ ಸಂಘದ ಮೂಲಕ) | ಕೊಡ ಬಯಸುವ ಇತರ ಮಾಹಿತಿ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |

**ನಮೂನೆ–2**

**ವಿದೇಶ ಪ್ರವಾಸ ಕೈಗೊಳ್ಳಲು ನಿಯೋಜಿಸಿರುವ ಸಹಕಾರ ಸಂಘದ ವಿವರ**

| ಸಂಘದ ಹೆಸರು & ನೋಂದಣಿ ಸಂಖ್ಯೆ | ಸಂಘದ ಮುಖ್ಯ ಉದ್ದೇಶ | ಸಂಘವು ಕಳೆದ 5 ವರ್ಷಗಳಲ್ಲಿ ಲಾಭ ಗಳಿಸಿದೆಯೇ? ಇದ್ದಲ್ಲಿ ಅದರ ವಿವರಗಳು | ಸಂಘವು ಸಂಚಿತ ನಷ್ಟದಲ್ಲಿದೆಯೇ? ಇದ್ದಲ್ಲಿ ವಿವರಗಳು | ಸಂಘದ ಆಡಳಿತ ಸಮಿತಿಗೆ ನಿಗದಿತ ಸಮಯದಲ್ಲಿ ಚುನಾವಣೆ ಮಾಡಲಾಗುತ್ತಿದೆಯೇ? ಕಳೆದ ಚುನಾವಣೆ ದಿನಾಂಕ | ಸಂಘವು ವಾರ್ಷಿಕ ಮಹಾಸಭೆಯನ್ನು ನಿಗದಿಪಡಿಸಿದ ಸಮಯದಲ್ಲಿ ನಡೆಸುತ್ತಿದೆಯೇ? ಕಳೆದ ವಾರ್ಷಿಕ ಮಹಾಸಭೆ ದಿನಾಂಕ | ಸಂಘದ ಲೆಕ್ಕಪತ್ರಗಳು ಪ್ರತಿ ವರ್ಷ ಆಡಿಟ್ ಆಗುತ್ತಿದೆಯೇ ಯಾವ ವರ್ಷದವರೆಗೆ ಆಡಿಟ್ ಆಗಿದೆ? ಹಿಂದಿನ ಆಡಿಟ್ ವರದಿಗಳಲ್ಲಿ ನಮೂದಿಸಲಾದ ಲೋಪದೋಷಗಳನ್ನು ಸರಿಪಡಿಸಲು ಕ್ರಮ ತೆಗೆದುಕೊಳ್ಳಲಾಗಿದೆಯೇ? ಇದ್ದಲ್ಲಿ ವಿವರಗಳು | ಸಂಘದಲ್ಲಿ ಹಣ ದುರುಪಯೋಗ ಏನಾದರೂ ಸಂಭವಿಸಿದೆಯೇ? ಇದ್ದಲ್ಲಿ ಸದರಿ ಹಣವನ್ನು ವಸೂಲಿ ಮಾಡಲಾಗಿದೆಯೇ? ವಿವರಗಳನ್ನು ನೀಡುವುದು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |

| ಹಣ ದುರುಪಯೋಗಕ್ಕೆ ಸಂಬಂಧಪಟ್ಟವರ ಮೇಲೆ ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗಿದೆಯೇ? ಅದರ ವಿವರಗಳು | ಹಣ ದುರುಪಯೋಗದಲ್ಲಿ ಭಾಗಿಯಾದ ಸಿಬ್ಬಂದಿ ವರ್ಗದ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳಲಾಗಿದೆಯೇ ಇದ್ದಲ್ಲಿ ಅದರ ವಿವರಗಳು | ಆರ್‌ಬಿಐ/ ನಬಾರ್ಡಿನಿಂದ ಪರಿವೀಕ್ಷಣೆ ಆಗಿದೆಯೇ? ಪರಿವೀಕ್ಷಣಾ ವರದಿಯಲ್ಲಿ ತಿಳಿಸಿರುವ ಲೋಪದೋಷಗಳನ್ನು ಸರಿಪಡಿಸಲು ಕ್ರಮ ತೆಗೆದು ಕೊಳ್ಳಲಾಗಿದೆಯೇ? ಇದ್ದಲ್ಲಿ ವಿವರಗಳು | ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ಅಡಿ ವಿಚಾರಣೆ ಏನಾದರೂ ಆಗಿದೆಯೇ ಇದ್ದಲ್ಲಿ ಫಲಿತಗಳು | ವಿಚಾರಣಾ ವರದಿಯ ಬಗ್ಗೆ ಕ್ರಮ ಕೈಗೊಳ್ಳ ಲಾಗಿದೆಯೇ? ವಿವರಗಳು | ಪ್ರಸ್ತಾಪಿತ ವಿದೇಶ ಪ್ರವಾಸವು ಸಂಘದ ಉದ್ದೇಶಗಳಿಗೆ ಯಾವ ರೀತಿ ಪ್ರಯೋಜನ ಕಾರಿಯಾಗಲಿದೆ | ಪ್ರಸ್ತಾಪಿತ ವಿದೇಶ ಪ್ರವಾಸದ ಅವಧಿ ಮತ್ತು ಯಾವ ಯಾವ ದೇಶಗಳಲ್ಲಿ | ಪ್ರಸ್ತಾಪಿತ ವಿದೇಶ ಪ್ರವಾಸಕ್ಕೆ ತಗಲುವ ವೆಚ್ಚ & ಅದನ್ನು ಹೇಗೆ ಭರಿಸ ಲಾಗುವುದು | ಇತರೆ |
|---|---|---|---|---|---|---|---|---|
| 9 | 10 | 11 | 12 | 13 | 14 | 15 | 16 | 17 |

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 243 ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿ) ಹಿಂದಿನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ತುಮಕೂರು ರವರ ವಿರುದ್ಧ ಇಲಾಖಾ ವಿಚಾರಣೆ – ಬದಲಿ ವಿಚಾರಣಾಧಿಕಾರಿಯನ್ನು ನೇಮಕ ಮಾಡಲು ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 138 ಎಸ್‌ಇಎನ್ 2007 ದಿ: 29.08.2007.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 291 ಕೆಇವಿ 2007 ದಿ: 18.12.2007.
3. ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಇವರ ಮನವಿ ದಿ:21.08.08.

**ಪ್ರಸ್ತಾವನೆ:**

ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿ) ರವರು ತುಮಕೂರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ 2006–07ನೇ ಸಾಲಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸಾರ್ವಜನಿಕ ಕುಡಿಯುವ ನೀರಿನ ಯೋಜನೆಯಡಿ ಹಣ ದುರುಪಯೋಗ ಮಾಡಿರುವುದು ಮತ್ತು ಯೋಜನೆಯ ಬಾಬ್ತಿನಲ್ಲಿ ಚಾಲ್ತಿಯಲ್ಲಿರುವ ಮಾರ್ಗದರ್ಶನವನ್ನು ಉಲ್ಲಂಘನೆ ಮಾಡಿರುವ 05 ಆರೋಪಗಳ ಸಂಬಂಧ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನಿರ್ದೇಶಕರು, (ಎಸ್‌ಇವಿ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ನಂತರ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಸಿ.ಎಂ. ಶಿರೋಳ್, ಭಾ.ಆ.ಸೇ. ನಿರ್ದೇಶಕರು, ಸುವರ್ಣ ಗ್ರಾಮೋದ್ಯೋಗ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಶ್ರೀ ಸಿ.ಎಂ. ಶಿರೋಳ್, ಭಾ.ಆ.ಸೇ ರವರು ಬಿಜಾಪುರ ಜಿಲ್ಲೆಯ ಜಿಲ್ಲಾಧಿಕಾರಿಗಳಾಗಿ ವರ್ಗಾವಣೆಗೊಂಡಿರುವ ಪ್ರಯುಕ್ತ ಹಾಗೂ ಒಂದು ವರ್ಷ ಕಳೆಯುತ್ತಿದ್ದರೂ ಈ ಪ್ರಕರಣದ ವಿಚಾರಣೆಯಲ್ಲಿ ಯಾವುದೇ ಪ್ರಗತಿ ಕಂಡು ಬರುತ್ತಿಲ್ಲವಾದ್ದರಿಂದ ಇವರ ಬದಲಿಗೆ ಬೇರೆ ವಿಚಾರಣಾಧಿಕಾರಿಗಳನ್ನು ನೇಮಿಸಲು ನಿರ್ಣಯಿಸಲಾಗಿದೆ. ಆದ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂ:ಸಿಆಸುಇ 291 ಕೆಇವಿ 2007, ಬೆಂಗಳೂರು, ದಿನಾಂಕ: 2ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿ) ಅಧಿಕಾರಿ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚಾರಣೆ ನಡೆಸಲು ದಿ:18.12.07 ರ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾದ ಶ್ರೀ ಸಿ.ಎಂ. ಶಿರೋಳ್, ಭಾ.ಆ.ಸೇ ನಿರ್ದೇಶಕರು, ಸುವರ್ಣ ಗ್ರಾಮೋದ್ಯೋಗ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ಇವರ ಬದಲಿಗೆ ನಿರ್ದೇಶಕರು, ಗ್ರಾಮೀಣ ಮೂಲಭೂತ ಸೌಲಭ್ಯಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ. ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಶೀಘ್ರವಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸತಕ್ಕದ್ದು.

ಉಪ ಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್ ತುಮಕೂರು ಇವರೇ ಈ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ಮುಂದುವರೆಯಲಿದ್ದಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 254

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಉದ್ಯಾನದ ಸ್ಥಳಾವಕಾಶಕ್ಕಾಗಿ ವಿಶೇಷ ರಿಯಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 49 ಅಡವಿ 2006 ದಿ: 16.5.06.
2. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 04 ಅಡವಿ 2007 ದಿ: 19.10.07.
3. ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಪತ್ರ ಸಂ:ಮಾತಂನಿ/ಲೆಕ್ಕ–1/ಐಟಿಪಾರ್ಕ್ ಹುಬ್ಬಳ್ಳಿ/06/511/07–08, ದಿನಾಂಕ: 17.10.2008.
4. ಮ್ಯಾನೇಜರ್, ಐಟಿ ಪಾರ್ಕ್ ಹುಬ್ಬಳ್ಳಿರವರ ಇ–ಮೇಲ್ ಪತ್ರ ದಿ: 11.9.08.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 16.5.06ರ ಸರ್ಕಾರಿ ಆದೇಶದಲ್ಲಿ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಉದ್ಯಾನಕ್ಕೆ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರ ಸೇವೆಗಳು ಹಾಗೂ ಹೊರಗುತ್ತಿಗೆಗಳ ಕ್ಷೇತ್ರದಲ್ಲಿ ಬಂಡವಾಳ ಹೂಡಿಕೆಗಳನ್ನು ಆಕರ್ಷಿಸುವ ಸಲುವಾಗಿ ಹುಬ್ಬಳ್ಳಿಯ ಮಾಹಿತಿ ತಂತ್ರಜ್ಞಾನ ಉದ್ಯಾನದಲ್ಲಿ ಹೂಡಿಕೆದಾರರು ಸ್ಥಳಾವಕಾಶ ಮಾಡಲು ಈ ಕೆಳಕಂಡ ವಿಶೇಷ ರಿಯಾಯಿತಿ ನೀಡಲಾಗಿತ್ತು.

ಅ) ಪ್ರತಿ ಚ.ಅಡಿಗೆ ರೂ. 10/–ಗಳಂತೆ ವೈಯಕ್ತಿಕವಾಗಿ ಕನಿಷ್ಠ 10,000 ಚ.ಅಡಿಗಳಂತೆ ಮೊದಲನೆ 50,000 ಚ.ಅಡಿಗಳಿಗೆ,

ಆ) ಸದರಿ 50,000 ಚ.ಅಡಿ ನಂತರ 15,000 ಚ.ಅಡಿಗಳಿಗೆ ಪ್ರತಿ ಚ.ಅಡಿಗೆ ರೂ. 15/– ದರದಲ್ಲಿ (ಮೊದಲ 50,000 ಚ.ಅಡಿಗಳು ಮುಗಿದ ನಂತರ),

ಇ) ಉಳಿದ ಜಾಗಕ್ಕೆ ರೂ. 30/–ಗಳಂತೆ (ಅಂದರೆ 65,000 ಚ.ಅಡಿ ಅಂದರೆ 50,000 ಚ.ಅಡಿ. ಮತ್ತು 15,000 ಚ.ಅಡಿ ಮುಗಿದ ನಂತರ) ಈ ಕೆಳಕಾಣಿಸಿದ ಷರತ್ತಿಗೊಳಪಟ್ಟು ವಿಶೇಷ ರಿಯಾಯಿತಿಗಳನ್ನು ನೀಡಲಾಗಿತ್ತು.

1) ಉಲ್ಲೇಖಿಸಿದ ಸರ್ಕಾರಿ ಆದೇಶ ಹೊರಡಿಸಿದ ದಿನಾಂಕದಿಂದ 6 ತಿಂಗಳ ಕಾಲಾವಧಿಗೆ ಸದರಿ ರಿಯಾಯಿತಿ ಅನ್ವಯಿಸುವಂತೆ

2) ಸಾಫ್ಟ್‌ವೇರ್ ಟೆಕ್ನಾಲಜಿ ಪಾರ್ಕ್ಸ್ ಆಫ್ ಇಂಡಿಯಾ ಈ ಸಂಸ್ಥೆಯಲ್ಲಿ ನೊಂದಾಯಿಸಿದ ಮಾಹಿತಿ ತಂತ್ರಜ್ಞಾನ ಕಂಪನಿಗಳು / ಫರ್ಮ್‌ಗಳಿಗೆ ಮಾತ್ರ ಸ್ಥಳಾವಕಾಶ ನೀಡಲು,

3) ವಿಶೇಷ ರಿಯಾಯಿತಿಯಡಿಯಲ್ಲಿನ ಬಾಡಿಗೆ ಕರಾರು 3 ವರ್ಷಗಳಿಗೆ ಮಾತ್ರ ಹಾಗೂ ತದನಂತರ ಬಾಡಿಗೆ ಪರಿಷ್ಕರಿಸಲು

ಮೇಲೆ (2) ರಲ್ಲಿ ಓದಲಾದ ದಿನಾಂಕ: 19.10.2007ರ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ ಕಂಪನಿಗಳನ್ನು ಉತ್ತೇಜಿಸುವ ಸಲುವಾಗಿ ಈ ಕೆಳಕಂಡ ಅಂಶಗಳಿಗೆ ಅನುಮೋದನೆ ನೀಡಲಾಗಿತ್ತು.

ಅ) ಪ್ರಸ್ತುತ ಇರುವ ಪ್ರತಿ ಚದರ ಅಡಿಗೆ ರೂ. 10/–ಗಳ ಬಾಡಿಗೆಯನ್ನು ರೂ. 9/–ಗಳಿಗೆ ಇಳಿಸಲು;

ಆ) ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಉದ್ಯಾನದ ಸ್ಥಳಾವಕಾಶಕ್ಕಾಗಿ ಬಾಡಿಗೆ ದರದಲ್ಲಿ ವಿಶೇಷ ರಿಯಾಯಿತಿಯಡಿ ಆಯ್ಕೆ ಮಾಡಿಕೊಳ್ಳುವವರಿಗೆ ಕನಿಷ್ಠ ಸ್ಥಳಾವಕಾಶವನ್ನು 10,000 ಚದರ ಅಡಿಗಳಿಂದ 2500 ಚ.ಅಡಿಗಳಿಗೆ ಇಳಿಸಲು; ಹಾಗೂ

ಇ) 2500 ಚ.ಅಡಿಗಳಿಗಿಂತಲೂ ಕಡಿಮೆ ಸ್ಥಳಾವಕಾಶವನ್ನು ಆಯ್ಕೆ ಮಾಡಿಕೊಳ್ಳುವವರಿಗೆ ಪ್ರಸ್ತುತ ಜಾರಿಯಲ್ಲಿರುವ ಬಾಡಿಗೆ ದರವನ್ನೇ ಮುಂದುವರೆಸಲು

ಸದರಿ ಆದೇಶದಲ್ಲಿನ ರಿಯಾಯಿತಿಯನ್ನು ಸರ್ಕಾರಿ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ವರೆಗೆ ವಿಸ್ತರಿಸಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಪತ್ರ ದಿನಾಂಕ:17.10.2008ರಲ್ಲಿ ರಿಯಾಯಿತಿಯು ದಿನಾಂಕ: 19.10.2007 ರಿಂದ ಒಂದು ವರ್ಷದ ಅವಧಿಯವರೆಗೆ ಇದ್ದು, ಅದನ್ನು 31.3.2009ರವರೆಗೆ ವಿಸ್ತರಿಸಲು ಪ್ರಸ್ತಾವಿಸಲಾಗಿದೆ. ಉಲ್ಲೇಖ (4) ರ ವ್ಯವಸ್ಥಾಪಕರು, ಐಟಿ ಪಾರ್ಕ್ ಹುಬ್ಬಳ್ಳಿ ಇವರ ಪತ್ರದಲ್ಲಿ ಕೆಲವು ಕಂಪನಿಯ ಹೂಡಿಕೆದಾರರನ್ನು ಸ್ಥಳವನ್ನು Lease-cum-Sale basis ಮೇಲೆ ನೀಡಲು ಅವಕಾಶ ಕಲ್ಪಿಸಲು ಪ್ರಸ್ತಾವಿಸಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 64 ಅಡವಿ 2008, ಬೆಂಗಳೂರು, ದಿನಾಂಕ: 2ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಮಾಹಿತಿ ತಂತ್ರಜ್ಞಾನ ಕಂಪನಿಗಳನ್ನು ಉತ್ತೇಜಿಸುವ ಸಲುವಾಗಿ ಮೇಲೆ (1) ಮತ್ತು (2) ರಲ್ಲಿನ ಸರ್ಕಾರಿ ಆದೇಶಗಳಲ್ಲಿ ರಿಯಾಯಿತಿ ದರದಲ್ಲಿ ನಿಗದಿಪಡಿಸಿರುವ ಬಾಡಿಗೆ ದರ ರೂ. 9/– (ಪ್ರತಿ ಚದರ ಅಡಿ)ನ್ನು ದಿನಾಂಕ: 18.10.2008 ರಿಂದ 31.3.2009ರವರೆಗೆ ವಿಸ್ತರಿಸಲು ಮಂಜೂರಾತಿ ನೀಡಲಾಗಿದೆ.

ಈಗಿರುವ ಗೇಣಿದಾರರಿಗೆ (Lease holders) ಅವರ ಗೇಣಿಯ ದಿನಾಂಕದಿಂದ ಅನ್ವಯವಾಗುತ್ತಿದ್ದ ದರವೇ ಅನ್ವಯವಾಗುತ್ತದೆ. ಕಂಪನಿಯ ಹೂಡಿಕೆದಾರರಿಗೆ (Investors) ಸ್ಥಳವನ್ನು Lease-cum-Sale basis ಮೇಲೆ ತೆಗೆದುಕೊಳ್ಳಲು ಆಯ್ಕೆಗೆ ತಾತ್ವಿಕ ಅನುಮೋದನೆ ನೀಡಲಾಗಿದೆ ಮತ್ತು ಅಂತಹ ಪ್ರಸ್ತಾವನೆಗಳಿಗೆ ಸರ್ಕಾರದ ಅನುಮೋದನೆ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 1574 ವೆಚ್ಚ 1/2008, ದಿನಾಂಕ: 18.12.08ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 264

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** 2007–08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (ಭಾ–2), ದಿನಾಂಕ: 12.03.2008.
2. ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳ, ದಿನಾಂಕ: 12.09.2008, 18.09.2008, 19.09.2008, 10.10.2008, 13.10.2008, 13.10.2008, 14.10.2008, 15.10.2008, 16.10.2008, 30.08.2008, 18.10.2008, 04.12.2008, 04.12.2008, 25.11.2008, 10.07.2008, 27.08.2008, 04.09.2008 ಮತ್ತು ದಿನಾಂಕ: 08.09.2008.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನ ಹಂಗಾಮಿನಲ್ಲಿ ದಿನಾಂಕ: 31.03.2008ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ಎಲ್ಲಾ ಕಬ್ಬನ್ನು ನುರಿಸಬೇಕೆಂಬ ಹಿನ್ನೆಲೆಯಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಕೆಲವು ವಿನಾಯಿತಿ ಮತ್ತು ಸಹಾಯಧನ ಸೌಲಭ್ಯಗಳನ್ನು ನೀಡಲಾಗುವುದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ (2) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳಲ್ಲಿ ಈ ಕೆಳಕಂಡ 19 ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿಯಲ್ಲಿ ಕಬ್ಬು ನುರಿಸಿದ್ದು, ಮತ್ತು 30 ಕಿ.ಮೀ. ಗೆ ಮೀರಿದ ದೂರದಿಂದ ಕಬ್ಬು ಸಾಗಾಣಿಕೆ ಮಾಡಿಕೊಂಡಿದ್ದು ಹಾಗೂ ಸಕ್ಕರೆಯನ್ನು ರಫ್ತು ಮಾಡಲಾಗಿದ್ದು ಈ ಸಂಬಂಧ ದಿನಾಂಕ: 12.03.2008ರ ಸರ್ಕಾರದ ಆದೇಶದಂತೆ 22,31,17,855/– ರೂಗಳ ಸಹಾಯಧನ 7,25,15,614/–ರೂಗಳ ಸಾಗಾಣಿಕೆ

ಸಹಾಯಧನ ಮತ್ತು 15,55,43,700/–ರೂಗಳ ರಫ್ತು ಸಹಾಯಧನ ಸೇರಿ ಒಟ್ಟು 45,11,77,169/–ರೂಗಳನ್ನು ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಹಣ ಬಿಡುಗಡೆಗೆ ಶಿಫಾರಸ್ಸು ಮಾಡಿದ್ದಾರೆ.

| ಕ್ರ. ಸಂ. | ಕಾರ್ಖಾನೆಯ ಹೆಸರು | ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ 100/– ರೂ ಸಹಾಯಧನ | ಸಾಗಾಣಿಕೆ ಸಹಾಯ ಧನ | ರಫ್ತು ಸಹಾಯ ಧನ |
|---|---|---|---|---|
| 1. | ಐ.ಸಿ.ಎಲ್. ಶುಗರ್ಸ್ (ಲಿ), | 1,80,96,000/– | 4,69,602/– | – |
| 2. | ಎಸ್.ಸಿ.ಎಂ. ಶುಗರ್ಸ್ (ಲಿ) | 2,62,85,172/– | 61,45,178/– | 20,80,800/– |
| 3. | ಬೀಳಗಿ ಶುಗರ್ಸ್ (ಲಿ) | 1,42,42,862/– | 53,55,978/– | 1,26,57,400/– |
| 4. | ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ | 25,96,600/– | 18,07,041/– | 25,00,000/– |
| 5. | ಶ್ರೀ ರೇಣುಕಾ ಶುಗರ್ಸ್ (ಲಿ) ಮನೋಳಿ, ಬೆಳಗಾಂ | – | 1,20,20,348/– | – |
| 6. | ಶ್ರೀ ರೇಣುಕಾ ಶುಗರ್ಸ್ (ಲಿ) ಬುಲಹಟ್ಟಿ | – | 2,03,95,592/– | – |
| 7. | ಶ್ರೀ ರೇಣುಕಾ ಶುಗರ್ಸ್ (ಲಿ) ಹವಲಗಾ, ಗುಲ್ಬರ್ಗಾ | – | 66,36,702/– | – |
| 8. | ಶ್ರೀ ರೇಣುಕಾ ಶುಗರ್ಸ್ (ಲಿ) ಆಳಂದ, ಗುಲಬರ್ಗಾ | – | 7,81,145/– | – |
| 9. | ಐ.ಎಸ್.ಆರ್. ಶುಗರ್ಸ್ (ಲಿ) | 1,78,87,700/– | – | 75,95,400/– |
| 10. | ಶ್ರೀ ಚಾಮುಂಡೇಶ್ವರಿ ಶುಗರ್ಸ್, ಕೆ.ಎಂ. ದೊಡ್ಡಿ | 2,89,94,700/– | 34,00,863/– | 25,00,000/– |
| 11. | ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ | 77,97,400/– | 1,81,879/– | 25,00,000/– |
| 12. | ಮೈಸೂರು ಸಕ್ಕರೆ ಕಾರ್ಖಾನೆ | 82,97,000/– | 28,887/– | – |
| 13. | ಗೋದಾವರಿ ಶುಗರ್ಸ್ (ಲಿ) | 4,32,18,900/– | 81,72,880/– | 7,06,19,000/– |
| 14. | ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 1,41,02,000/– | 6,97,000/– | 5,26,20,900/– |
| 15. | ಶ್ಯಾಮನೂರು ಶುಗರ್ಸ್ (ಲಿ) | 1,34,55,808/– | 30,04,119/– | 24,70,200/– |
| 16. | ಮಹಾತ್ಮಾಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 51,93,300/– | 12,68,693/– | – |
| 17. | ರೈತರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 94,78,512/– | 9,61,001/– | – |
| 18. | ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 67,33,651/– | 11,29,120/– | – |
| 19. | ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 67,38,250/– | 68,68,86/– | – |
| | **ಒಟ್ಟು** | **22,31,17,855/–** | **7,25,15,614/–** | **15,55,43,700/–** |

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕಾರ್ಖಾನೆಗಳು ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ 100/–ರೂಗಳ ಸಹಾಯಧನ ಬೇಡಿಕೆ ಮೊತ್ತ 22,31,17,855/– ಗಳಲ್ಲಿ ಶೇ.50ರಷ್ಟು ಅಂದರೆ 11,15,00,000/– ರೂಗಳನ್ನು ಮತ್ತು ಸಾಗಾಣಿಕೆ ಸಹಾಯಧನ 7,25,00,000/–ರೂಗಳು ಸೇರಿ ಒಟ್ಟು 18,40,00,000/– ರೂಗಳನ್ನು ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 19 ಎಸ್‌ಜಿಎಫ್ 2008 (4), ಬೆಂಗಳೂರು, ದಿನಾಂಕ: 2ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದ 19 ಸಕ್ಕರೆ ಕಾರ್ಖಾನೆಗಳಿಗೆ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ 11,15,00,000/–(ಹನ್ನೊಂದು ಕೋಟಿ ಹದಿನೈದು ಲಕ್ಷ ರೂಗಳು ಮಾತ್ರ)ರೂಗಳ ಸಹಾಯಧನ ಮತ್ತು 30 ಕಿ.ಮೀ. ದೂರದಿಂದ ಕಬ್ಬು ಸಾಗಾಣಿಕೆ ಮಾಡಿಕೊಂಡಿದ್ದು, ಇದಕ್ಕೆ ಸಾಗಾಣಿಕೆ ಸಹಾಯಧನ 7,25,00,000/– (ಏಳು ಕೋಟಿ ಇಪ್ಪತ್ತೈದು ಲಕ್ಷ ರೂಗಳು ಮಾತ್ರ) ರೂಗಳು ಸೇರಿ ಒಟ್ಟು 18,40,00,000/– (ಹದಿನೆಂಟು ಕೋಟಿ ನಲವತ್ತು ಲಕ್ಷ ರೂಗಳು ಮಾತ್ರ) ರೂಗಳನ್ನು ಈ ಆದೇಶದ ಅನುಬಂಧದಲ್ಲಿ ಕಾಣಿಸಿರುವ 19 ಸಕ್ಕರೆ ಕಾರ್ಖಾನೆಗಳಿಗೆ/ ರೈತರಿಗೆ ನೀಡುವ ಸಲುವಾಗಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2008–09ನೇ ಸಾಲಿನ ಪರಿಷ್ಕೃತ ಆಯವ್ಯಯದಲ್ಲಿ ಈ ಉದ್ದೇಶಕ್ಕಾಗಿ ಲೆಕ್ಕ ಶೀರ್ಷಿಕೆ 2852–08–201–0–07 (ಯೋಜನೆ) 106 ಸಹಾಯಧನ ಇದರಡಿಯಲ್ಲಿ ಒದಗಿಸಲಾದ 50.00 ಕೋಟಿ ರೂಗಳಲ್ಲಿ ಸದರಿ ಹಣವನ್ನು ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ:12.03.2008ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಮೂಲಕ ಸಂಬಂಧಿಸಿದ ಕಾರ್ಖಾನೆಗಳಿಗೆ ಮತ್ತು ರೈತರಿಗೆ ಬಿಡುಗಡೆ ಮಾಡಲು ಕ್ರಮ ವಹಿಸತಕ್ಕದ್ದು. ಕಾರ್ಖಾನೆಗಳು ರೈತರಿಗೆ ಕಬ್ಬು ಖರೀದಿ ಬಾಕಿ ಉಳಿಸಿಕೊಂಡಿದ್ದಲ್ಲಿ, ರೈತರಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದ್ದು, ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1757 ವೆಚ್ಚ–1/2008, ದಿನಾಂಕ:01.01.2009 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದ್‌ಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 19 ಎಸ್‌ಜಿಎಫ್ 2008(4), ದಿನಾಂಕ: 02–01–2009ಕ್ಕೆ ಸಂಬಂಧಿಸಿದ ಅನುಬಂಧ ದಿನಾಂಕ: 01.04.2008 ರಿಂದ 31.07.2008ರವರೆಗೆ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಪ್ರತಿ ಟನ್ ಕಬ್ಬಿಗೆ ರೂ.100/–ರಂತೆ ಸಹಾಯಧನ ಮತ್ತು 30 ಕಿ.ಮೀಗಿಂತ ಮೀರಿದ ದೂರದಿಂದ ಸಾಗಾಣಿಕೆ ಮಾಡಿಕೊಂಡ ಕಬ್ಬಿಗೆ ಸಾಗಾಣಿಕೆ ಸಹಾಯಧನ**

(ರೂಪಾಯಿಗಳಲ್ಲಿ)

| ಕ್ರ. ಸಂ. | ಕಾರ್ಖಾನೆಯ ಹೆಸರು | ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುವ ಮೊತ್ತ | ಬಿಡುಗಡೆ ಮಾಡಲಾದ ಹಣ | ಸಾಗಾಣಿಕೆ ಸಹಾಯಧನ ಕಾರ್ಖಾನೆಗಳಿಗೆ/ ರೈತರಿಗೆ | ಸಂಬಂಧಿಸಿದ ಜಿಲ್ಲಾಧಿಕಾರಿ |
|---|---|---|---|---|---|
| 1. | ಕೋರಮಂಡಲ ಶುಗರ್ಸ್ (ಲಿ) (ಐ.ಸಿ.ಎಲ್. ಶುಗರ್ಸ್) | 1,80,96,000/– | 90,48,000/– | 4,69,602/– | ಮಂಡ್ಯ |
| 2. | ಎನ್.ಎಸ್.ಎಲ್.ಶುಗರ್ಸ್ (ಲಿ) [ಎಸ್.ಸಿ.ಎಂ. ಶುಗರ್ಸ್ (ಲಿ)] | 2,62,85,172/– | 1,31,19,659/– | 61,45,178/– ರೈತರಿಗೆ 52,82,179/– ಕಾರ್ಖಾನೆಗೆ 8,62,999/– | ಮಂಡ್ಯ |
| 3. | ಬೀಳಗಿ ಶುಗರ್ಸ್ (ಲಿ) | 1,42,42,862/– | 71,21,431/– | 53,55,978/– | ಬಾಗಲಕೋಟೆ |
| 4. | ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ | 25,96,600/– | 12,98,300/– | 18,07,041/– | ಬೆಳಗಾಂ |
| 5. | ಶ್ರೀ ರೇಣುಕಾ ಶುಗರ್ಸ್ (ಲಿ) ಮನೋಳಿ, ಬೆಳಗಾಂ | – | | 1,20,20,348/– ರೈತರಿಗೆ | ಬೆಳಗಾಂ |
| 6. | ಶ್ರೀ ರೇಣುಕಾ ಶುಗರ್ಸ್ (ಲಿ) ಬುರ್ಲಹಟ್ಟಿ | – | | 2,03,95,592/– ರೈತರಿಗೆ | ಬೆಳಗಾಂ |
| 7. | ಶ್ರೀ ರೇಣುಕಾ ಶುಗರ್ಸ್ (ಲಿ) ಹವಲಗಾ, ಗುಲ್ಬರ್ಗಾ | – | | 66,36,702/– ರೈತರಿಗೆ | ಗುಲ್ಬರ್ಗಾ |
| 8. | ಶ್ರೀ ರೇಣುಕಾ ಶುಗರ್ಸ್ (ಲಿ) ಆಳಂದ, ಗುಲಬರ್ಗಾ | – | | 7,81,145/– ರೈತರಿಗೆ | ಗುಲ್ಬರ್ಗಾ |
| 9. | ಐ.ಎಸ್.ಆರ್. ಶುಗರ್ಸ್ (ಲಿ) | 1,78,87,700/– | 89,43,850/– | – | ಬಳ್ಳಾರಿ |
| 10. | ಶ್ರೀ ಚಾಮುಂಡೇಶ್ವರಿ ಶುಗರ್ಸ್, | 2,89,94,700/– | 1,44,61,350/– | 34,00,863/– | ಮಂಡ್ಯ |

| ಕ್ರ. ಸಂ. | ಕಾರ್ಖಾನೆಯ ಹೆಸರು | ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುವ ಮೊತ್ತ | ಬಿಡುಗಡೆ ಮಾಡಲಾದ ಹಣ | ಸಾಗಾಣಿಕೆ ಸಹಾಯಧನ ಕಾರ್ಖಾನೆಗಳಿಗೆ/ ರೈತರಿಗೆ | ಸಂಬಂಧಿಸಿದ ಜಿಲ್ಲಾಧಿಕಾರಿ |
|---|---|---|---|---|---|
| 11. | ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ | 77,97,400/– | 38,98,700/– | 1,81,879/– | ಹಾಸನ |
| 12. | ಮೈಸೂರು ಸಕ್ಕರೆ ಕಾರ್ಖಾನೆ | 82,97,000/– | 41,48,500/– | 28,887/– | ಮಂಡ್ಯ |
| 13. | ಗೋದಾವರಿ ಶುಗರ್ಸ್ (ಲಿ) | 4,32,18,900/– | 2,16,09,450/– | 81,57,266/– | ಬಾಗಲಕೋಟೆ |
| 14. | ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 1,41,02,000/– | 70,51,000/– | 6,97,000/– | ಬೆಳಗಾಂ |
| 15. | ಶ್ಯಾಮನೂರು ಶುಗರ್ಸ್ (ಲಿ) | 1,34,55,808/– | 67,27,904/– | 30,04,199/– | ದಾವಣಗೆರೆ |
| 16. | ಮಹಾತ್ಮಾಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 51,93,300/– | 25,96,650/– | 12,68,693/– | ಬೀದರ್ |
| 17. | ರೈತರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 94,78,512/– | 47,39,256/– | 9,61,001/– [ರೈತರಿಗೆ 4,45,703/– ಕಾರ್ಖಾನೆಗೆ 5,15,298/–] | ಬಾಗಲಕೋಟೆ |
| 18. | ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 67,33,651/– | 33,66,825/– | 11,29,120/– | ಮೈಸೂರು |
| 19. | ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 67,38,250/– | 33,69,125/– | 68,68,86/– | ಬೀದರ್ |
| | **ಒಟ್ಟು** | **22,31,17,855/–** | **11,15,00,000/–** | **7,25,00,000/–** | |

ಸಿಐ 19 ಎಸ್‌ಜಿಎಫ್ 2008

**ಪಿ. ಆನಂದ್‌ಕುಮಾರ್**

ಪಿ.ಆರ್. 265 ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** Transaction Advisor ಗಳ ಅರ್ಹತಾ ಪಟ್ಟಿಯನ್ನು (Empanelment) ಮಾಡಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ಜಾಹಿರಾತನ್ನು Marketing Consultants & Agencies ಮುಖಾಂತರ ದಿನಪತ್ರಿಕೆಗಳಲ್ಲಿ ಪ್ರಕಟಿಸಿರುವುದಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:** ಸಹಾಯಕ ವ್ಯವಸ್ಥಾಪಕರು, M.C & A ಇವರ ಪತ್ರ ಸಂಖ್ಯೆ. IDD/C & D/MGS/2008-09-1647 ದಿನಾಂಕ: 16.10.2008 ಹಾಗೂ 24.10.2008.

**ಪ್ರಸ್ತಾವನೆ:**

ದಿನಾಂಕ: 18.6.07ರ ಆದೇಶದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ಪಿಪಿಪಿ ಕೋಶವನ್ನು ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಿರ್ದೇಶಕರು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಹಾಗೂ ತಜ್ಞರನ್ನೊಳಗೊಂಡಂತೆ ರಚಿಸಲು ಅನುಮೋದನೆಯನ್ನು ನೀಡಲಾಗಿದೆ. ಈ ಕೋಶವು ನಿರ್ವಹಿಸಬಹುದಾದ ಕಾರ್ಯಗಳನ್ನು ಸಹ ಸದರಿ ಆದೇಶದಲ್ಲಿ ತಿಳಿಸಿ ಪಿಪಿಪಿ ಯೋಜನೆಗೆ ಸಂಬಂಧಿಸಿದ ಪ್ರಸ್ತಾವನೆಗಳನ್ನು ಸ್ವೀಕರಿಸಿ ಅದನ್ನು ಏಕಗವಾಕ್ಷಿಯ ಸಮಿತಿಯ ಮುಂದೆ ಪರಿಗಣನೆಗೆ ತರಲು ಅನುಮೋದನೆಯನ್ನು ನೀಡಲಾಗಿದೆ. ಹೊಸ ಮೂಲಸೌಲಭ್ಯ ನೀತಿ 2007ರ ಆದೇಶ ಸಂ. IDD 32 IDM 03ರಲ್ಲಿ ಹೊರಡಿಸಲಾಗಿದೆ. ಇದು ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕ 19.7.07 ರಿಂದ ಜಾರಿಗೆ ಬಂದಿರುತ್ತದೆ. ಈ ನೀತಿಯಡಿ ಪಿ.ಪಿ.ಪಿ.ಯೋಜನೆಗಳನ್ನು ಪಿ.ಪಿ.ಪಿ.ಕೋಶದ ಮೂಲಕ ಅನುಷ್ಠಾನ ಕಲ್ಪಿಸಲು ಅವಕಾಶ ನೀಡಿದೆ.

2. ಪಿಪಿಪಿ ಯೋಜನೆಗಳ ಜಾರಿಗೆ ನಿರ್ವಹಣಾ ಸಮಾಲೋಚಕರನ್ನು (Transaction Advisors) ನೇಮಿಸಿಕೊಳ್ಳಲು KTPP ಕಾಯ್ದೆ ಅನುಸರಿಸಿ ಅರ್ಜಿಗಳನ್ನು ಆಹ್ವಾನಿಸಲು ಜಾಹಿರಾತನ್ನು ದಿನಾಂಕ: 30.09.2008 ರಂದು ಆಂಗ್ಲ ದಿನಪತ್ರಿಕೆ (Times of India) ಕನ್ನಡ ದಿನಪತ್ರಿಕೆ (ವಿಜಯ ಕರ್ನಾಟಕ), ಹಾಗೂ ವ್ಯವಹಾರ ದಿನಪತ್ರಿಕೆ (Economic Times) ಗಳಲ್ಲಿ

M.C.A. ಮುಖಾಂತರ ಪ್ರಕಟಿಸಲಾಗಿದೆ. ಅನಂತರ ಬಿಡ್ ಸ್ವೀಕೃತಿ ದಿನಾಂಕ ವಿಸ್ತರಿಸಿ ಇನ್ನೊಂದು ತಿದ್ದುಪಡಿಯನ್ನು ದಿನಾಂಕ: 16.10.2008ರ ಮೇಲಿನ ಪತ್ರಿಕೆಗಳಲ್ಲಿ ಪ್ರಕಟಿಸಲಾಗಿದೆ.

3. ದಿನಾಂಕ: 30.09.2008 ರಂದು ಪ್ರಕಟಿಸಿದ ಜಾಹೀರಾತಿಗೆ ರೂ.98,041–00 ಹಾಗೂ ದಿನಾಂಕ: 16.10.2008 ರಂದು ಪ್ರಕಟಿಸಿದ, ತಿದ್ದುಪಡಿ ಜಾಹೀರಾತಿಗೆ ರೂ.61,275–00 ಗಳನ್ನು ಪಾವತಿಸಲು ಉಲ್ಲೇಖಿತ ಪತ್ರಗಳಲ್ಲಿ ಸಹಾಯಕ ವ್ಯವಸ್ಥಾಪಕರು, MCA ಇವರು ಕೋರಿರುತ್ತಾರೆ.

4. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಮೂಅಇ 71 ಮೂಇವಿ 2008, ಬೆಂಗಳೂರು, ದಿನಾಂಕ: 3ನೇ ಜನವರಿ 2009**

ನಿರ್ವಹಣಾ ಸಮಾಲೋಚಕರ (Transaction Advisors) ನೇಮಕಾತಿಗಾಗಿ ಪ್ರಕಟಿಸಿದ ಜಾಹೀರಾತು ಹಾಗೂ ತಿದ್ದುಪಡಿ ಬಿಲ್ಲಿನ ಮೊತ್ತ ರೂ.1,59,316/– ರೂಗಳನ್ನು MCA ಸಂಸ್ಥೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2. ಈ ಮೊತ್ತವನ್ನು 2008–09ನೇ ಸಾಲಿನ ಲೆಕ್ಕ ಶೀರ್ಷಿಕೆ "3451-00-090-1-06-059-Infrastructure Preliminary Studies – Other Expenditure" ಇದರಡಿ ಒದಗಿಸಿರುವ ರೂ.100.00 ಕೋಟಿಯಿಂದ ಬಿಡುಗಡೆ ಮಾಡಲಾಗಿದೆ.

3. ಈ ಮೊತ್ತವನ್ನು ವ್ಯವಸ್ಥಾಪಕ ನಿರ್ದೇಶಕರು, MCA ರವರು ಪೇಯೀಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ಖಜಾನೆಯಿಂದ ಡ್ರಾ ಮಾಡಲು ಅನುಮೋದನೆ ನೀಡಿದೆ.

4. ಈ ಆದೇಶವನ್ನು ದಿನಾಂಕ: 16.05.08ರ ಆದೇಶ ಸಂ. FD 1 TFP 2008 ರಡಿಯಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 283

ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಲಯ ಕಾರ್ಯಪಡೆ ರಚನೆ – ಸದಸ್ಯರ ನಾಮಕರಣ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 50 ಅಡವಿ 2008 ದಿ: 23.8.08.
2. ದಿನಾಂಕ: 18.12.08ರಂದು ನಡೆದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಲಯ ಕಾರ್ಯಪಡೆಯ ಸಭೆಯ ನಡವಳಿ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 23.8.2008ರ ಸರ್ಕಾರಿ ಆದೇಶದಲ್ಲಿ ಮಾನ್ಯ ಮುಖ್ಯಮಂತ್ರಿಯವರು ದಿನಾಂಕ: 17.7.2008 ರಂದು ವಿಧಾನಮಂಡಲದಲ್ಲಿ ಮಂಡಿಸಿದ 2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ರಾಜ್ಯದ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲಗಳನ್ನು ಗಮನದಲ್ಲಿರಿಸಿಕೊಂಡು 6 ವಿಶೇಷ ವಲಯಗಳನ್ನು ಖಾಸಗಿ ಸಹಭಾಗಿತ್ವದಲ್ಲಿ ರೂಪಿಸಲಾಗುವುದು ಎಂಬ ಘೋಷಣೆಯಡಿಯಲ್ಲಿ ಉಲ್ಲೇಖಿಸಲಾಗಿರುವ 6 ವಲಯಗಳ ಪೈಕಿ ಮೈಸೂರು, ಮಂಗಳೂರು, ಹುಬ್ಬಳ್ಳಿ ಧಾರವಾಡ, ಬೆಳಗಾವಿ, ಶಿವಮೊಗ್ಗ ಮತ್ತು ಗುಲ್ಬರ್ಗದಲ್ಲಿ ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ ವಲಯವನ್ನು ಸ್ಥಾಪಿಸಲು ಅನುವಾಗಲು ಈ ಕೆಳಕಂಡವರನ್ನು ಒಳಗೊಂಡಂತೆ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಲಯ ಕಾರ್ಯಪಡೆಯನ್ನು ರಚಿಸಲಾಗಿದೆ.

| | | |
|---|---|---|
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ | – | ಅಧ್ಯಕ್ಷರು |
| ನಿರ್ದೇಶಕರು, ಮಾತಂ ಮತ್ತು ಜೈತಂ ನಿರ್ದೇಶನಾಲಯ | – | ಸದಸ್ಯರು |
| ವ್ಯವಸ್ಥಾಪಕ ನಿರ್ದೇಶಕರು, ಕಿಯೋನಿಕ್ಸ್ | – | ಸದಸ್ಯರು |
| ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ | – | ಸದಸ್ಯರು |
| ಸಂಬಂಧಿಸಿದ ಜಿಲ್ಲೆಯ ಜಿಲ್ಲಾಧಿಕಾರಿಗಳು | – | ಸದಸ್ಯರು |
| ನಿರ್ದೇಶಕರು, ಐಐಐಟಿಬಿ, ಬೆಂಗಳೂರು | – | ಸದಸ್ಯರು |

ನಿರ್ದೇಶಕರು, ಐಐಎಬಿ, ಬೆಂಗಳೂರು – ಸದಸ್ಯರು
ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಒಬ್ಬ ಖ್ಯಾತ ಉದ್ಯಮಿ – ಸದಸ್ಯರು
ಜೈವಿಕ ತಂತ್ರಜ್ಞಾನ ಕ್ಷೇತ್ರದ ಒಬ್ಬ ಖ್ಯಾತ ಉದ್ಯಮಿ – ಸದಸ್ಯರು
ಸದಸ್ಯ ಕಾರ್ಯದರ್ಶಿ – ಅಧ್ಯಕ್ಷರಿಂದ ತೀರ್ಮಾನವಾಗಬೇಕು.

ಮೇಲೆ (2) ರಲ್ಲಿ ಓದಲಾದ ದಿನಾಂಕ:18.12.08ರಂದು ನಡೆದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಲಯ ಕಾರ್ಯಪಡೆಯ ಸಭೆಯ ನಿರ್ಣಯದಂತೆ, ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿನ ಖ್ಯಾತ ಉದ್ಯಮಿ ಶ್ರೀ ವಿನಯ್ ಎಲ್. ದೇಶಪಾಂಡೆ, ಅವರನ್ನು ಜೈವಿಕ ತಂತ್ರಜ್ಞಾನ ಕ್ಷೇತ್ರದಲ್ಲಿನ ಖ್ಯಾತ ಉದ್ಯಮಿ, ಶ್ರೀ ಶ್ರೀಕುಮಾರ ಸೂರ್ಯನಾರಾಯಣರವರನ್ನು ಸದಸ್ಯರುಗಳಾಗಿ ಹಾಗೂ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಿಭಾಗದ ಉಪ ಕಾರ್ಯದರ್ಶಿಯವರನ್ನು ಸದಸ್ಯ ಕಾರ್ಯದರ್ಶಿಯಾಗಿ ನೇಮಿಸುವ ಬಗ್ಗೆ ತೀರ್ಮಾನಿಸಲಾಗಿದೆ. ಅದರಂತೆ ಈ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 50 ಅಡವಿ 2008, ಬೆಂಗಳೂರು, ದಿನಾಂಕ: 5ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಚಿತವಾಗಿರುವ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಲಯ ಕಾರ್ಯಪಡೆಗೆ ಈ ಕೆಳಕಂಡಂತೆ ಸದಸ್ಯರನ್ನು ನೇಮಿಸಲಾಗಿದೆ.

ಶ್ರೀ ವಿನಯ್ ಎಲ್. ದೇಶಪಾಂಡೆ – ಸದಸ್ಯರು
ಅಧ್ಯಕ್ಷರು ಹಾಗೂ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು,
ಎನ್‌ಕೋರ್ ಸಾಫ್ಟ್‌ವೇರ್ ಲಿಮಿಟೆಡ್ [Encore Software Ltd]

ಶ್ರೀ ಶ್ರೀಕುಮಾರ ಸೂರ್ಯನಾರಾಯಣ – ಸದಸ್ಯರು
ಡೈರೆಕ್ಟರ್ ಜನರಲ್, ಅಸೋಸಿಯೇಷನ್ ಆಫ್ ಬಯೋಟೆಕ್ನಾಲಜಿ ಲೆಡ್
ಎಂಟರ್‌ಪ್ರೈಸಸ್ [ABLE]

ಸರ್ಕಾರದ ಉಪ ಕಾರ್ಯದರ್ಶಿ, – ಸದಸ್ಯ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ
ಇಲಾಖೆ [ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಿಭಾಗ]

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 287 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಜಿ.ವಿ. ಸೀನಪ್ಪ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ವಿಭಾಗಾಧಿಕಾರಿ, ಕುಮಟಾ ಉಪ ವಿಭಾಗ, ಕುಮಟಾ ಇವರ ವಿರುದ್ಧ ಇಲಾಖಾ ವಿಚಾರಣೆ – ಅಂತಿಮ ಆದೇಶ.

**ಓದಲಾಗಿದೆ:**
1. ದಿನಾಂಕ:18.05.07 ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 298 ಎಸ್‌ಇಎನ್ 06.
2. ಶ್ರೀ ಜಿ. ನಂದಕುಮಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ:03.11.07 ಮತ್ತು 01.07.08ರ ವಿಚಾರಣಾ ವರದಿ.
3. 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಸಿಆಸುಇ 077 ಕೆಇವಿ 07, ದಿನಾಂಕ: 11.08.08.
4. ಶ್ರೀ ಜಿ.ವಿ. ಸೀನಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಇವರ ದಿನಾಂಕ: 20.08.08ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶ್ರೀ ಜಿ.ವಿ. ಸೀನಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರನ್ನು ದಿನಾಂಕ:28.06.06ರ ಅಧಿಸೂಚನೆ ಸಂಖ್ಯೆ: ಸಿಆಸುಇ 118 ಆಸೇವ 06 ರ ಪ್ರಕಾರ ಉಪ ವಿಭಾಗಾಧಿಕಾರಿ, ಕುಮಟಾ ಉಪ ವಿಭಾಗ, ಕುಮಟಾ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿದ್ದರೂ, ಇವರು ಸದರಿ ವರ್ಗಾಯಿಸಿದ ಹುದ್ದೆಯ ಕರ್ತವ್ಯಕ್ಕೆ ಹಾಜರಾಗದಿರುವ ಆರೋಪದಲ್ಲಿನ ಸತ್ಯಾಸತ್ಯತೆಯ ವಿಚಾರಣೆಯ ಮೂಲಕ ತಿಳಿಯುವ ಸಲುವಾಗಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11 (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ಜಿ. ನಂದಕುಮಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಂತೆ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿಯಲ್ಲಿ ಶ್ರೀ ಜಿ.ವಿ. ಸೀನಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರ ವಿರುದ್ಧದ ವರ್ಗಾಯಿಸಲಾದ ಹುದ್ದೆಯ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತವಾಗಿ ಗೈರು ಹಾಜರಾಗುವ ಮೂಲಕ ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಾವಳಿಯನ್ನು ಉಲ್ಲಂಘಿಸಿ, ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗಿರುವ ಆರೋಪಗಳು ಸಾಬೀತಾಗಿದೆ ಎಂದು ವರದಿ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ 2ನೇ ಕಾರಣ ಕೇಳುವ ನೋಟೀಸಿನ ಜೊತೆ ವಿಚಾರಣಾ ವರದಿಯ ಪ್ರತಿಯನ್ನು ಆಪಾದಿತರಿಗೆ ಒದಗಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಲಿಖಿತ ಉತ್ತರದಲ್ಲಿ ವಿವರಣೆಯನ್ನು ಪಡೆಯಲಾಗಿದೆ. ವಿಚಾರಣಾ ವರದಿಯನ್ನು ಹಾಗೂ ಅಧಿಕಾರಿಯು ನೀಡಿದ ಉತ್ತರವನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 077 ಕೆಇವಿ 07, ಬೆಂಗಳೂರು, ದಿನಾಂಕ: 6ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 (iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ವಿ. ಸೀನಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ (ಪ್ರಸ್ತುತ ಉಪ ವಿಭಾಗಾಧಿಕಾರಿಗಳು, ಚಿಕ್ಕಬಳ್ಳಾಪುರ ಉಪ ವಿಭಾಗ, ಚಿಕ್ಕಬಳ್ಳಾಪುರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ) ಇವರಿಗೆ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆಹಿಡಿಯುವ ದಂಡನೆ ವಿಧಿಸಿದೆ. ಹಾಗೂ ದಿನಾಂಕ: 11.07.06 ರಿಂದ 15.01.07 ರವರೆಗಿನ ಗೈರು ಹಾಜರಿ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 106–ಎ ಪ್ರಕಾರ ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

ಪಿ.ಆರ್. 296

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಹೆಚ್.ಪಿ. ವೆಂಕಟೇಶ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಇರುದ್ಧದ ಅಭಿಯೋಜನಾ ಆದೇಶದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ ಐಎನ್‌ವಿ(ಜಿ)/ ಸಿಟಿ/ ಕ್ರೈಂ–47/ 2007 ದಿನಾಂಕ: 15.12.2007.
2. ಸರ್ಕಾರಿ ಆದೇಶ ಸಂಖ್ಯೆ:ಆಇ 47 ವಾತೆತ 2007 ದಿನಾಂಕ: 21.04.2008.
3. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ ಐಎನ್‌ವಿ(ಜಿ)/ಸಿಟಿ/ಕ್ರೈಂ–47/2007/ ದಿನಾಂಕ: 7.11.2008.

**ಪ್ರಸ್ತಾವನೆ:**

ಶ್ರೀ ಹೆಚ್.ಪಿ. ವೆಂಕಟೇಶ್, ವಾಣಿಜ್ಯ ತೆರಿಗೆ ಅಧಿಕಾರಿ, (ಜಾಗೃತಿ ದಳ), ಕೋರಮಂಗಲ, ಬೆಂಗಳೂರು, ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಸದರಿ ಅಧಿಕಾರಿಯವರ ವಿರುದ್ಧ ಫಿರ್ಯಾದುದಾರರಾದ ಶ್ರೀ ಕೆ.ಆರ್. ಲೋಕೇಶ್, ಮೆ:ರಂಗಸ್ವಾಮಿ ಫ್ಯಾಬ್ರಿಕೇಟರ್ಸ್, ರಾಜಾಜಿನಗರ, ಬೆಂಗಳೂರು, ಇವರು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದೂರು ಸಲ್ಲಿಸಿ, ಇವರು ಫ್ಯಾಬ್ರಿಕೇಟ್ ಮಾಡಿದ ರೈಲಿಂಗ್ಸ್‌ಗಳನ್ನು ಬಿಲ್ಲಿನೊಂದಿಗೆ ಮೆ:ಇ.ಸಿ.ಸಿ.ಐ. ಕಂಪನಿ, ಮಾಗಡಿ ರಸ್ತೆ, ಬೆಂಗಳೂರು, ಇಲ್ಲಿಗೆ ಅವರ ಟೆಂಪೋ ವಾಹನ ಸಂಖ್ಯೆ ಕೆಎ–02 ಬಿ–1309 ರಲ್ಲಿ ಸಾಗಿಸುತ್ತಿದ್ದಾಗ ಸದರಿ ವಾಹನವನ್ನು ವಾಣಿಜ್ಯ ತೆರಿಗೆ ಅಧಿಕಾರಿಗಳು ಮಾಗಡಿ ರಸ್ತೆಯಲ್ಲಿ ತಡೆದು ರೈಲಿಂಗ್ಸ್‌ಗಳ ತೂಕದಲ್ಲಿ ವ್ಯತ್ಯಾಸವಿದೆ. ಈ ಸಂಬಂಧ ಪ್ರಕರಣವನ್ನು ದಾಖಲು ಮಾಡುತ್ತೇವೆಂದು ಹೆದರಿಸಿ, ಸದರಿ ಟೆಂಪೋವನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದರು. ಈ ವಾಹನವನ್ನು ಬಿಡುಗಡೆ ಮಾಡಲು ಫಿರ್ಯಾದುದಾರರಿಗೆ ರೂ.30,000/–ಗಳ ಅಕ್ರಮ ಸಂಭಾವನೆಯನ್ನು ಒತ್ತಾಯಿಸಿರುತ್ತಾರೆ. ಆದರೆ ಈ ಹಣವನ್ನು ಕೊಡಲು ಸಾಧ್ಯವಿಲ್ಲವೆಂಬ ಕಾರಣದ ಮೇಲೆ ರೂ.8,000/–ಗಳ ಅಕ್ರಮ ಸಂಭಾವನೆಗಾಗಿ ಒತ್ತಾಯಿಸಿರುತ್ತಾರೆ. ಆದರೆ ಫಿರ್ಯಾದುದಾರರಿಗೆ ಅಕ್ರಮ ಸಂಭಾವನೆಯನ್ನು ಕೊಡಲು ಇಷ್ಟವಿಲ್ಲದಿದ್ದ ಕಾರಣ ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ:47/2007 ದಿನಾಂಕ: 13.12.2007 ರಲ್ಲಿ ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚನ ಕಲಂ 13(2)ರ ಪ್ರಕಾರ ಈ ಪ್ರಕರಣವನ್ನು ದಾಖಲಿಸಿಕೊಂಡ ಲೋಕಾಯುಕ್ತ ಪೊಲೀಸ್ ಅಧಿಕಾರಿಗಳು ತನಿಖೆ ಕೈಗೊಂಡಿರುತ್ತಾರೆ. ತನಿಖಾಧಿಕಾರಿಯವರು ತಮ್ಮ ಸಿಬ್ಬಂದಿ ಹಾಗೂ ಪಂಚ ಸಾಕ್ಷಿಗಳ ಸಮೇತ ಅದೇ ದಿನ ದಿನಾಂಕ: 13.12.2007 ರಂದು ರಿಸಾಲ್ದಾರ್ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು, ಇಲ್ಲಿ

ಆಪಾದಿತ ಅಧಿಕಾರಿಯ ವಿರುದ್ಧ ಬೀಸಿದ ಬಲೆಯು ಯಶಸ್ವಿಯಾಗಿದ್ದು, ಟ್ರ್ಯಾಪ್ ಸಮಯದಲ್ಲಿ ಆರೋಪಿ–1 ಶ್ರೀ ಹೆಚ್.ಪಿ. ವೆಂಕಟೇಶ್, ವಾ.ತೆ.ಅ., ರವರು ತಾವು ಒತ್ತಾಯ ಮಾಡಿದ್ದ ಲಂಚದ ಹಣ ರೂ. 8,000/– ಗಳನ್ನು ತಮ್ಮ ಪಕ್ಕದಲ್ಲಿದ್ದ ಶ್ರೀ ಎಂ.ಎಂ.ಗಣೇಶಪ್ಪ, ವಾಣಿಜ್ಯ ತೆರಿಗೆ ಪರಿವೀಕ್ಷಕರು, ಇವರಿಗೆ ಕೊಡುವಂತೆ ಫಿರ್ಯಾದುದಾರರಿಗೆ ತಿಳಿಸಿದ್ದರು. ಅದರಂತೆ ಮತ್ತೊಬ್ಬ ಆರೋಪಿತರಾದ ಶ್ರೀ ಎಂ.ಎಂ. ಗಣೇಶಪ್ಪ, ವಾಣಿಜ್ಯ ತೆರಿಗೆ ನಿರೀಕ್ಷಕರು, ಜಾಗೃತಿ ದಳ, ಬೆಂಗಳೂರು, ಇವರು ಫಿರ್ಯಾದುದಾರರಿಂದ ಅಕ್ರಮ ಸಂಭಾವನೆಯ ರೂ.8,000/– ಗಳನ್ನು ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಪೊಲೀಸರಿಗೆ ನೇರವಾಗಿ ಸಿಕ್ಕಿಬಿದ್ದಿದ್ದಾರೆ.

ಲೋಕಾಯುಕ್ತರವರ ಶಿಫಾರಸ್ಸಿನ ಮೇರೆಗೆ ಶ್ರೀ ಹೆಚ್.ಪಿ. ವೆಂಕಟೇಶ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (2)ರ ಆದೇಶದನ್ವಯ ಅಮಾನತ್ತಿನಲ್ಲಿಡಲಾಗಿದೆ.

ಶ್ರೀ ಹೆಚ್.ಪಿ. ವೆಂಕಟೇಶ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿರುವ ತನಿಖಾಧಿಕಾರಿಯ ಅಂತಿಮ ವರದಿಯ ಪ್ರಕಾರ ಆರೋಪಿತ ಸರ್ಕಾರಿ ಅಧಿಕಾರಿ ಶ್ರೀ ಹೆಚ್.ಪಿ. ವೆಂಕಟೇಶ್, ಇವರ ವಿರುದ್ಧ ದಾಖಲಾಗಿರುವ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)ಲ ಜೊತೆಗೆ 13(2) ರಡಿಯಲ್ಲಿನ ಆಪಾದನೆಗಳು ಮೇಲ್ನೋಟಕ್ಕೆ ಸಾಭೀತಾಗಿರುತ್ತದೆ. ಆದ್ದರಿಂದ ಸದರಿ ಆರೋಪಿತರು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅರ್ಹರಿರುತ್ತಾರೆ. ಆದುದರಿಂದ ಸದರಿ ಅಧಿಕಾರಿಯನ್ನು ಅವರು ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ರ ಕಲಂ 19(1) ರನ್ವಯ ಮಂಜೂರಾತಿ ನೀಡುವಂತೆ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (3)ರ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಸರ್ಕಾರವನ್ನು ಕೋರಿರುತ್ತಾರೆ.

ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 47 ವಾತೆತ 2007, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಪಿ. ವೆಂಕಟೇಶ್, ವಾಣಿಜ್ಯ ತೆರಿಗೆ ಅಧಿಕಾರಿ (ಅಮಾನತ್ತಿನಲ್ಲಿ), ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 19.12.2008 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಹಬೂಬ್ ಖಾನ್**

ಪೀಠಾಧಿಕಾರಿ, ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2).

ಪಿ.ಆರ್. 306

**ಆರ್ಥಿಕ ಸಚಿವಾಲಯ**

**ವಿಷಯ:** ಶ್ರೀ ಎನ್. ದೇವಾನಂದಬಾಬು, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧದ ಅಭಿಯೋಜನಾ ಆದೇಶದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**

1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ–29/2005/ದಿನಾಂಕ: 28.09.2005.
2. ಸರ್ಕಾರಿ ಆದೇಶ ಸಂಖ್ಯೆ:ಆಇ 50 ವಾತೆತ 2005 ದಿನಾಂಕ: 21.11.2005.
3. ಸರ್ಕಾರಿ ಆದೇಶ ಸಂಖ್ಯೆ:ಆಇ 50 ವಾತೆತ 2005 ದಿನಾಂಕ: 03.10.2007.
4. ತನಿಖಾ ದಾಖಲೆಗಳಾದ ಪ್ರಥಮ ತನಿಖಾ ವರದಿ/ ಶೋಧನಾ ಪಂಚನಾಮೆಗಳು, ಸಾಕ್ಷಿದಾರರ ಹೇಳಿಕೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು,
5. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ–29/2005/ ದಿನಾಂಕ:02.08.2008.

**ಪ್ರಸ್ತಾವನೆ:**

ಎನ್. ದೇವಾನಂದಬಾಬು, ಪ್ರಸ್ತುತ ವಾಣಿಜ್ಯ ತೆರಿಗೆ ಅಧಿಕಾರಿ, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರವರ ಕಛೇರಿ, ಕೋರಮಂಗಲ, ಬೆಂಗಳೂರು, ಇವರು ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂದು

ತಿಳಿದು ಬಂದ ವಿಶ್ವಾಸಾರ್ಹ ಮಾಹಿತಿಯನ್ವಯ ಸದರಿ ಆರೋಪಿತರ ವಿರುದ್ಧ ಬೆಂಗಳೂರು ನಗರ ಪೋಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 29/2005ರ ಪ್ರಕಾರ ದಿನಾಂಕ: 9.8.2005 ರಂದು ಲಂಚ ನಿರೋಧಕ ಕಾಯ್ದೆ 1988 ಕಲಂ 13(1)(ಇ) ಜೊತೆ 13(2)ರ ರೀತ್ಯ ಪ್ರಕರಣವನ್ನು ದಾಖಲಿಸಿಕೊಂಡಿರುತ್ತಾರೆ. ದಾಖಲಿಸಿರುವ ಪ್ರಕರಣದ ಮೇರೆಗೆ ಮೇಲೆ (1) ಮತ್ತು (4) ರಲ್ಲಿ ಓದಲಾದ ತನಿಖಾಧಿಕಾರಿಯ ವರದಿ ಮತ್ತು ತನಿಖಾ ದಾಖಲೆಗಳನ್ನು ಹೆಚ್ಚುವರಿ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ (5) ರಲ್ಲಿ ಓದಲಾದ ದಿನಾಂಕ:02.08.2008ರ ಪತ್ರದೊಂದಿಗೆ ಕಳುಹಿಸಿಕೊಟ್ಟು ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1) ಪ್ರಥಮ ವರ್ತಮಾನದ ವರದಿ.
2) ಶೋಧನಾ ಪಂಚನಾಮೆಗಳು:
   (i) ಮನೆ ನಂ.301, 7ನೇ ಮುಖ್ಯರಸ್ತೆ, ಹೆಚ್.ಆರ್.ಬಿ.ಆರ್. ಬಡಾವಣೆ, ಹೆಣ್ಣೂರು ಬಾಣಸವಾಡಿ, ಬೆಂಗಳೂರು ಇಲ್ಲಿ ದಿನಾಂಕ: 10–08–2005 ರಂದು ನಡೆಸಲಾದ ಶೋಧನಾ ಪಂಚನಾಮೆ.
   (ii) ಆರೋಪಿತರ ತಂದೆ ಶ್ರೀ ಮುನಿಯಪ್ಪನವರ ವಾಸದ ಮನೆ ಭಾವನ ಹಳ್ಳಿ ಅಂಚೆ, ಮಾಲೂರು ತಾಲ್ಲೂಕು, ಕಸಬಾ ಹೋಬಳಿ, ಕೋಲಾರ ಜಿಲ್ಲೆ ಇಲ್ಲಿ ದಿನಾಂಕ:10.08.2005 ರಂದು ನಡೆಸಲಾದ ಶೋಧನಾ ಪಂಚನಾಮೆ.

ಶ್ರೀ ಎನ್. ದೇವಾನಂದಬಾಬು, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ದಾಖಲಾಗಿರುವ ಲೋಕಾಯುಕ್ತ ದಾಳಿ ಪ್ರಕರಣ ಕುರಿತಂತೆ, ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿದ ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ: 30.07.2008ರ ಪ್ರಕಾರ ಆಪಾದಿತ ಅಧಿಕಾರಿಯಾದ ಶ್ರೀ ದೇವಾನಂದಬಾಬುರವರು ದಿನಾಂಕ: 17.6.1992 ರಿಂದ 10.08.2005 ರವರೆಗಿನ ಪರಿಶೀಲನಾ ಅವಧಿ (ಚೆಕ್ ಪಿರಿಯಡ್) ಯಲ್ಲಿ ಒಟ್ಟು ರೂ.30,69,267–56 ಪೈಸೆಗಳ ಒಟ್ಟು ಆಸ್ತಿಯನ್ನು ಹೊಂದಿರುತ್ತಾರೆಂದು ಮತ್ತು ಈ ಅವಧಿಯಲ್ಲಿ ಆಪಾದಿತರು ತಮ್ಮ ಮತ್ತು ತಮ್ಮ ಕುಟುಂಬದ ಸದಸ್ಯರಿಗಾಗಿ ಮಾಡಿರುವ ಒಟ್ಟು ಖರ್ಚು ರೂ.53,69,552–28 ಪೈಸೆಗಳಾಗಿದ್ದು, ಆಪಾದಿತರು ಈ ಅವಧಿಯಲ್ಲಿ ಎಲ್ಲಾ ಬಲ್ಲ ಮೂಲಗಳಿಂದ ಗಳಿಸಿರುವ ಆದಾಯವು ಒಟ್ಟು ರೂ.28,57,891–42 ಪೈಸೆಗಳಾಗಿರುತ್ತದೆ. ಆಪಾದಿತ ಆಸ್ತಿಯ ಮತ್ತು ಖರ್ಚಿನ ಒಟ್ಟು ಮೊತ್ತ ರೂ.84,38,819–84 ಪೈಸೆಗಳಾಗಿದ್ದು, ಹೆಚ್ಚಿನ ಪ್ರಮಾಣದ ಆಸ್ತಿಯ ಒಟ್ಟು ಮೊತ್ತವು ರೂ.55,80,928–42 ಪೈಸೆಗಳಾಗುತ್ತವೆ. ಅಂದರೆ ಆಪಾದಿತ ಅಧಿಕಾರಿ ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತಲೂ ಶೇ.195.28 ರಷ್ಟು ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡುಬರುತ್ತದೆ. ಈ ಹೆಚ್ಚಿನ ಆಸ್ತಿಯ ಬಗ್ಗೆ ಆರೋಪಿತರು ಯಾವುದೇ ತೃಪ್ತಿಕರ ವಿವರಣೆ ಅಥವಾ ಲೆಕ್ಕವನ್ನು ನೀಡಿರುವುದಿಲ್ಲ. ಈ ರೀತಿಯ ಆರೋಪಿಯು ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧವು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆಪಾದಿತರು ಸಾರ್ವಜನಿಕ ಹಿತದೃಷ್ಟಿಯಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಲು ಅರ್ಹರಾಗಿರುತ್ತಾರೆ. ಅವರನ್ನು ಅಭಿಯೋಜನೆಗೆ ಒಳಪಡಿಸಲು ಸಕ್ಷಮ ಪ್ರಾಧಿಕಾರದ ಅರ್ಥಾತ್ ಸದರಿ ಆಪಾದಿತ ಅಧಿಕಾರಿಯನ್ನು ತನ್ನ ಹುದ್ದೆಯಿಂದ ತೆಗೆದುಹಾಕುವ ಅಧಿಕಾರವುಳ್ಳ ಪ್ರಾಧಿಕಾರದ ಪೂರ್ವಾನುಮತಿ ಅತ್ಯಗತ್ಯವಾಗಿರುತ್ತದೆ ಎಂದು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ತಿಳಿಸಿರುತ್ತಾರೆ.

ಆದ್ದರಿಂದ ಶ್ರೀ ಎನ್. ದೇವಾನಂದಬಾಬು, ವಾ.ತೆ.ಅ. ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಮಂಜೂರಾತಿ ಆದೇಶವನ್ನು ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (5) ರಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತರವರು ಕೋರಿರುತ್ತಾರೆ.

ತನಿಖೆಯು ಪೂರ್ಣಗೊಂಡ ನಂತರ ಆಪಾದಿತರ ವಶದಲ್ಲಿದ್ದ ಒಟ್ಟು ಆಸ್ತಿ ಆದಾಯದ ವಿವರಗಳು ಈ ಕೆಳಗಿನಂತೆ ಇರುವುದೆಂದು ತನಿಖಾಧಿಕಾರಿಯು ಅಂತಿಮ ವರದಿಯಲ್ಲಿ ತಿಳಿಸಿರುತ್ತಾರೆ.

**ಆಪಾದಿತರ ಮತ್ತು ಅವರ ಕುಟುಂಬದ ಸದಸ್ಯರ ಹೆಸರಿನಲ್ಲಿರುವ ಆಸ್ತಿಗಳ ಸಂಕ್ಷಿಪ್ತ ವಿವರಗಳು ಮತ್ತು ಮೌಲ್ಯದ ಪಟ್ಟಿ**

| ಕ್ರ. ಸಂ. | ಆಸ್ತಿಗಳ ವಿವರಗಳು | ಮೌಲ್ಯ |
|---|---|---|
| 1) | ಭಾವನ ಹಳ್ಳಿ, ಸರ್ವೆ ನಂ.139 ರಲ್ಲಿ 7 ಎಕರೆ 38 ಗುಂಟೆ ಜಮೀನು | – |
| 2) | ಭಾವನ ಹಳ್ಳಿ, ಸರ್ವೆ ನಂ.183 ರಲ್ಲಿ 3 ಎಕರೆ 24 ಗುಂಟೆ ಜಮೀನು | – |
| 3) | ಭಾವನ ಹಳ್ಳಿ, ಸರ್ವೆ ನಂ.180/6 ರಲ್ಲಿ 3 ಎಕರೆ 26 ಗುಂಟೆ ಜಮೀನು | – |
| 4) | ಭಾವನ ಹಳ್ಳಿ, ಸರ್ವೆ ನಂ.207 ರಲ್ಲಿ 1 ಎಕರೆ 14 ಗುಂಟೆ ಜಮೀನು | – |

| ಕ್ರ. ಸಂ. | ಆಸ್ತಿಗಳ ವಿವರಗಳು | ಮೌಲ್ಯ |
|---|---|---|
| 5) | ಭಾವನ ಹಳ್ಳಿ, ಸರ್ವೆ ನಂ.208/3 ರಲ್ಲಿ 14 ಗುಂಟೆ ಜಮೀನು | – |
| 6) | ಭಾವನ ಹಳ್ಳಿ, ಸರ್ವೆ ನಂ.209/4 ರಲ್ಲಿ 26 ಗುಂಟೆ ಜಮೀನು | – |
| 7) | ಭಾವನ ಹಳ್ಳಿ, ಸರ್ವೆ ನಂ.233/1 ರಲ್ಲಿ 4 ಎಕರೆ 17 ಗುಂಟೆ ಜಮೀನು | – |
| 8) | ಭಾವನ ಹಳ್ಳಿ, ಸರ್ವೆ ನಂ.181 ರಲ್ಲಿ 1 ಎಕರೆ 19 ಗುಂಟೆ ಜಮೀನು | – |
| 9) | ಭಾವನ ಹಳ್ಳಿ, ಸರ್ವೆ ನಂ.182 ರಲ್ಲಿ 2 ಎಕರೆ ಜಮೀನು | – |
| 10) | ಭಾವನ ಹಳ್ಳಿ, ಸರ್ವೆ ನಂ.167 ರಲ್ಲಿ 2 ಎಕರೆ 30 ಗುಂಟೆ ಜಮೀನು | – |
| 11) | ನಿವೇಶನ ಸಂಖ್ಯೆ:10, ಸರ್ವೆ ನಂ.93/2, ಜಾರಕ್‌ಬಂಡೆ ಕಾವಲ್, ಬೆಂಗಳೂರು. | – |
| 12) | ಭಾವನ ಹಳ್ಳಿ, ಸರ್ವೆ ನಂ.239 ರಲ್ಲಿ 15 ಎಕರೆ 31 ಗುಂಟೆ ಜಮೀನು | ರೂ. 1,30,000–00 |
| 13) | ನಿವೇಶನ ಸಂಖ್ಯೆ: 301, 7ನೇ ಮುಖ್ಯರಸ್ತೆ, ಕಲ್ಯಾಣ ನಗರ, ಬಾಣಸವಾಡಿ, ಬೆಂಗಳೂರು | ರೂ. 5,56,345–00 |
| 14) | 40x60 ಅಳತೆಯ ನಿವೇಶನ ಸಂಖ್ಯೆ:182, ಖಾತಾ ನಂ.192, ವೈಟ್ ಗಾರ್ಡನ್, ಮಾಲೂರು ಟೌನ್, (ಆರೋಪಿತ ಅಧಿಕಾರಿಯವರ ಮಗಳು ಶ್ರೀಮತಿ ಎನ್.ಡಿ.ಆಶಾ ಕಿರಣ್‌ರವರ ಹೆಸರಿನಲ್ಲಿ) | ರೂ. 72,000–00 |
| 15) | 40x29 ಅಳತೆಯ ನಿವೇಶನ ಸಂಖ್ಯೆ: 5965 ರಾಜೇಂದ್ರ ಲೇಔಟ್, ಮಾಲೂರು (ಆರೋಪಿಯ ಅಧಿಕಾರಿಯವರ ನಾದಿನಿ ಶ್ರೀಮತಿ ಉಮಾದೇವಿಯವರ ಹೆಸರಿನಲ್ಲಿ) | – |
| 16) | ಬಿ.ಡಿ.ಎ.ನಿವೇಶನ ಸಂಖ್ಯೆ: 616, ನಂದಿನಿ ಲೇಔಟ್, ಲಗ್ಗೆರೆ, ಬೆಂಗಳೂರು | ರೂ. 19,033–00 |
| 17) | ಸರ್ವೆ ನಂ.62 ಭಾವನ ಹಳ್ಳಿ, 6 ಎಕರೆ 22 ಗುಂಟೆ ಜಮೀನು | ರೂ. 4,75,000–00 |
| 18) | ರಿಜಿಸ್ಟ್ರೇಷನ್ ಸಂಖ್ಯೆ: ಕೆಎ 04–ಎನ್ 3396 ಜೆನ್ ಕಾರು (ಆರೋಪಿತ ಅಧಿಕಾರಿಯ ಹೆಸರಿನಲ್ಲಿ) | – |
| 19) | ಹೀರೋ ಹೋಂಡ ಮೋಟಾರ್ ಸೈಕಲ್ ರಿಜಿಸ್ಟ್ರೇಷನ್ ಸಂಖ್ಯೆ: ಕೆಎ03–ಇಡಿ–7506 | ರೂ.59,800–00 |
| 20) | ಗೆಟ್ಸ್ ಕಾರು ರಿಜಿಸ್ಟ್ರೇಷನ್ ಸಂಖ್ಯೆ: ಕೆಎ03–ಎಂಜಿ–1242 | ರೂ.5,51,803–00 |
| 21) | ಮಾರುತಿ ಕಾರ್ ರಿಜಿಸ್ಟ್ರೇಷನ್ ಸಂಖ್ಯೆ: ಕೆಎ4–ಎನ್–1242 | – |
| 22) | 562 ಗ್ರಾಂ ಮತ್ತು 900 ಮಿಲಿ ಗ್ರಾಂ ಚಿನ್ನದ ಒಡವೆ ಮತ್ತು 7 ಕೆ.ಜಿ. 678 ಗ್ರಾಂ ಬೆಳ್ಳಿಯ ವಸ್ತುಗಳು ಹಾಗೂ ಇತರೇ ಗೃಹೋಪಯೋಗಿ ವಸ್ತುಗಳು | ರೂ. 7,82,359–00 |
| 23) | ಶೋಧನಾ ಕಾಲದಲ್ಲಿ ದೊರೆತ ನಗದು ಹಣ | ರೂ.32,000–00 |
| 24) | ಶ್ರೀ ಎನ್.ಡಿ. ವೆಂಕಟೇಶ್‌ಬಾಬು ರವರ ಹೆಚ್.ಡಿ.ಎಫ್.ಸಿ. ಬ್ಯಾಂಕ್, ಕಮ್ಮನಹಳ್ಳಿ, ಉಳಿತಾಯ ಖಾತೆ | ರೂ. 19.84 |
| 25) | ಶ್ರೀ ಟಿ.ಮುನಿಯಪ್ಪರವರ ಉಳಿತಾಯ ಖಾತೆ ಸಂಖ್ಯೆ:4182 ಕೆನರಾಬ್ಯಾಂಕ್, ಕಲ್ಯಾಣನಗರ | – |
| 26) | ಆರೋಪಿತ ಅಧಿಕಾರಿಯವರ ಉಳಿತಾಯ ಖಾತೆ ಸಂಖ್ಯೆ:000019738 ಕೆನರಾ ಬ್ಯಾಂಕ್, ಮೆಜೆಸ್ಟಿಕ್ ಶಾಖೆ. | – |
| 27) | ಶ್ರೀ ಟಿ.ಮುನಿಯಪ್ಪ ಮತ್ತು ಆರೋಪಿತ ಅಧಿಕಾರಿಯವರ ಜಂಟಿ ಖಾತೆ ಸಂಖ್ಯೆ:3201 ವಿಜಯಾ ಬ್ಯಾಂಕ್, ಚಿಕ್ಕಕುಂತೂರು ಶಾಖೆ | ರೂ. 2,162–00 |
| 28) | ಆರೋಪಿತ ಅಧಿಕಾರಿಯವರ ಉಳಿತಾಯ ಖಾತೆ ಸಂಖ್ಯೆ: 1302, ಕೆನರಾ ಬ್ಯಾಂಕ್ ಕಲ್ಯಾಣ ನಗರ | 839–60 |
| 29) | ಆರೋಪಿತ ಅಧಿಕಾರಿಯವರ ಪತ್ನಿಯ ಉಳಿತಾಯ ಖಾತೆ ಸಂಖ್ಯೆ: 1296, ಕೆನರಾ ಬ್ಯಾಂಕ್ ಕಲ್ಯಾಣ ನಗರ ಶಾಖೆ. | 163–00 |
| 30) | ಶ್ರೀ ವೇಮನ ಸೌಹಾರ್ದ ಪತ್ತಿನ ಸಹಕಾರ ಸಂಘ ಲಿ. ಬೆಂಗಳೂರು, ಇದರಲ್ಲಿನ ಷೇರುಗಳು (ಆರೋಪಿತ ಅಧಿಕಾರಿಯ ಹೆಸರಿನಲ್ಲಿ) | ರೂ. 5,000–00 |
| 31) | ಶ್ರೀ ವೇಮನ ಸೌಹಾರ್ದ ಪತ್ತಿನ ಸಹಕಾರ ಸಂಘ ಲಿ. ಬೆಂಗಳೂರು, ಇದರಲ್ಲಿನ ಷೇರುಗಳು (ಆರೋಪಿತ ಅಧಿಕಾರಿಯವರ ಪತ್ನಿಯ ಹೆಸರಿನಲ್ಲಿ) | ರೂ. 2,000–00 |

| ಕ್ರ. ಸಂ. | ಆಸ್ತಿಗಳ ವಿವರಗಳು | ಮೌಲ್ಯ |
|---|---|---|
| 32) | ಮಹರ್ಷಿ ವಾಲ್ಮೀಕಿ ಗಿರಿಜನ ಪತ್ತಿನ ಸಹಕಾರ ಸಂಘ ನಿಯಮಿತ – ಷೇರುಗಳು (ಆರೋಪಿಯ ಅಧಿಕಾರಿಯ ಹೆಸರಿನಲ್ಲಿ) | ರೂ. 2,500–00 |
| 33) | ಮಹರ್ಷಿ ವಾಲ್ಮೀಕಿ ಗಿರಿಜನ ಪತ್ತಿನ ಸಹಕಾರ ಸಂಘ ನಿಯಮಿತ – ಷೇರುಗಳು (ಆರೋಪಿತ ಅಧಿಕಾರಿಯ ಪತ್ನಿಯ ಹೆಸರಿನಲ್ಲಿ) | ರೂ. 2,500–00 |
| 34) | ಆರೋಪಿತ ಅಧಿಕಾರಿಯವರ ತಂದೆ ಶ್ರೀ ಟಿ.ಮುನಿಯಪ್ಪ, – ಇಂಡಿಯಾನ ಜಿಮ್ ಖಾನಾ ಕ್ಲಬ್, ಕಾಕ್ಸ್‌ಟೌನ್, ಬೆಂಗಳೂರು. ಇವರ ಸದಸ್ಯರಾಗಿರುತ್ತಾರೆ. | – |
| 35) | ಕರ್ನಾಟಕ ಕಮರ್ಷಿಯಲ್ ಟ್ಯಾಕ್ಸ್ ಅಧಿಕಾರಿಗಳ ಸೇವಾ ಸಂಘ ಇದರ ಅಜೀವ ಸದಸ್ಯರು – ಆರೋಪಿತ ಅಧಿಕಾರಿ | – |
| 36) | ಆರೋಪಿತ ಅಧಿಕಾರಿಯವರು ಕಾಸ್ಮ ಪಾಲಿಟನ್ ಕ್ಲಬ್, ಕಲ್ಯಾಣ ನಗರ – ಇದರ ಸದಸ್ಯರಾಗಿರುತ್ತಾರೆ. | – |
| 37) | ಕೆನೆಟಿಕ್ ಹೋಂಡ ರಿಜಿಸ್ಟ್ರೇಷನ್ ಸಂಖ್ಯೆ: ಕೆಎ03–ಇಬಿ–3329 | ರೂ. 33,865–00 |
| 38) | ಮಹೇಂದ್ರ & ಮಹೇಂದ್ರ ಟ್ರಾಕ್ಟರ್ 475 ಡಿ1 – ಇದರ ಖರೀದಿ | ರೂ.3,32,305–00 |
| 39) | ಆರೋಪಿತ ಅಧಿಕಾರಿಯವರ ತಂದೆ ಶ್ರೀ ಟಿ.ಮುನಿಯಪ್ಪ, ಇವರ ಹೆಸರಿನಲ್ಲಿ ಉಳಿತಾಯ ಖಾತೆ ಸಂಖ್ಯೆ: 15783–ಬ್ಯಾಂಕ್ ಆಫ್ ಇಂಡಿಯಾ ಕೆ.ಜಿ.ರಸ್ತೆ ಶಾಖೆ, ಬೆಂಗಳೂರು. | – |
| 40) | ಶ್ರೀ ಎನ್.ಡಿ. ಶ್ರೀಧರಬಾಬು, ಉಳಿತಾಯ ಖಾತೆ ನಂ.01190025150 | 556–82 |
| 41) | ಶ್ರೀ ಎನ್.ಡಿ. ಶ್ರೀಧರಬಾಬು, ಉಳಿತಾಯ ಖಾತೆ ನಂ.38139 ಕೆನರಾ ಬ್ಯಾಂಕ್ ಫ್ರೇಜರ್‌ಟೌನ್ ಶಾಖೆ | 9.00 |
| 42) | ಶ್ರೀ ಎನ್.ಡಿ. ವೆಂಕಟೇಶ್ ಬಾಬುರವರ ಉಳಿತಾಯ ಖಾತೆ ಸಂಖ್ಯೆ: 01190025584 ಎಸ್.ಬಿ.ಐ. ಬ್ಯಾಂಕ್, ಬಾಣಸವಾಡಿ ಶಾಖೆ | 7.35 |
| 43) | ಆರೋಪಿತ ಅಧಿಕಾರಿಯವರ ಸ್ವಗ್ರಾಮ ಭಾವನಹಳ್ಳಿ ಮನೆಯಲ್ಲಿ ಕಂಡುಬಂದಿರುವ ಗೃಹೋಪಯೋಗಿ ವಸ್ತುಗಳು | – |
| 44) | ಎಲೆಕ್ಟ್ರಿಸಿಟಿ ಡೆಪಾಸಿಟ್ – ಮನೆ ನಂ.301, 7ನೇ ಮುಖ್ಯರಸ್ತೆ, 80 ಅಡಿ ರಸ್ತೆ, ಕಲ್ಯಾಣ ನಗರ, ಹೆಚ್.ಆರ್.ಬಿ.ಆರ್. ಲೇಔಟ್, ಬೆಂಗಳೂರು. | – |
| 45) | ವಾಟರ್ ಸಪ್ಲೈ ಡೆಪಾಸಿಟ್ – ಮನೆ ನಂ.301, 7ನೇ ಮುಖ್ಯರಸ್ತೆ, 80 ಅಡಿ ರಸ್ತೆ | – |
| 46) | ಅಡಿಗೆ ಅನಿಲ ಸಂಪರ್ಕ | ರೂ.1,900–00 |
| 47) | ಬಿ.ಎಸ್.ಎನ್.ಎಲ್. ದೂರವಾಣಿ ಸಂಪರ್ಕ ಡಿಪಾಸಿಟ್ | – |
| | **ಒಟ್ಟು ಮೊತ್ತ** | **ರೂ.30,69,267–56** |

**ಖರ್ಚು ವೆಚ್ಚ ವಿವರಗಳು**

| ಕ್ರ. ಸಂ. | ಆಸ್ತಿಗಳ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 1) | ಕೌಟುಂಬಿಕ ವೆಚ್ಚ | 4,96,361–00 |
| 2) | ಟಿ.ಎ.ಸಿ. ಮೌಲ್ಯ ಮಾಪನ | 30,07,000–00 |
| 3) | ನಿವೇಶನ ಸಂಖ್ಯೆ: 10 ಸರ್ವೆ ನಂ.93/2, ಜಾರಕ್‌ಬಂಡೆ ಕಾವಲ್, ಇದರ ನೋಂದಣಿ ಮತ್ತು ಸ್ಟ್ಯಾಂಪ್ ಶುಲ್ಕ | – |
| 4) | ಭಾವನ ಹಳ್ಳಿ ಸರ್ವೆ ನಂ.239 ರಲ್ಲಿ 15 ಎಕರೆ 31 ಗುಂಟೆ ಜಮೀನು ನೋಂದಣಿ | 20,884–00 |
| 5) | ನಿವೇಶನ ಸಂಖ್ಯೆ: 301, 7ನೇ ಮುಖ್ಯರಸ್ತೆ, ಕಲ್ಯಾಣ ನಗರ, ಬಾಣಸವಾಡಿ ಇದರ ನೋಂದಣಿ ಮತ್ತು ಸ್ಟ್ಯಾಂಪ್ ಶುಲ್ಕ | 1,22,315–00 |
| 6) | ಬಿ.ಡಿ.ಎ.ನಿವೇಶನ ಸಂಖ್ಯೆ: 616, ನಂದಿನಿ ಲೇಔಟ್, ಲಗ್ಗೆರೆ, ಬೆಂಗಳೂರು ಇದರ ನೋಂದಣಿ ಮತ್ತು ಸ್ಟ್ಯಾಂಪ್ ಶುಲ್ಕ | 2,500–00 |

| ಕ್ರ. ಸಂ. | ಆಸ್ತಿಗಳ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 7) | ನಿವೇಶನ ಸಂಖ್ಯೆ: 182, ಖಾತಾ ನಂ.192, ವೈಟ್ ಗಾರ್ಡನ್, ಮಾಲೂರು ಟೌನ್, ಇದರ ನೋಂದಣಿ ಮತ್ತು ಸ್ಟ್ಯಾಂಪ್ ಶುಲ್ಕ | 7,265–00 |
| 8) | ಸರ್ವೆ ನಂ.62 ಭಾವನ ಹಳ್ಳಿ, 6 ಎಕರೆ 22 ಗುಂಟೆ ಜಮೀನು ಇದರ ನೋಂದಣಿ ಮತ್ತು ಸ್ಟ್ಯಾಂಪ್ ಶುಲ್ಕ | 73,687–00 |
| 9) | ನಿವೇಶನ ಸಂಖ್ಯೆ: 301, 7ನೇ ಮುಖ್ಯರಸ್ತೆ, ಕಲ್ಯಾಣ ನಗರ, ಇದರ ತೆರಿಗೆ ಪಾವತಿ | 29,421–00 |
| 10) | ಬಿ.ಡಿ.ಎ. ನಿವೇಶನ ಸಂಖ್ಯೆ: 616, ನಂದಿನಿ ಲೇಔಟ್, ಲಗ್ಗೆರೆ, ಬೆಂಗಳೂರು ಇದರ ತೆರಿಗೆ ಪಾವತಿ | 1,738–00 |
| 11) | ಮನೆ ನಂ–301ಕ್ಕೆ ನೀರು ಸರಬರಾಜು ವೆಚ್ಚ | 36,634–00 |
| 12) | ಮನೆ ನಂ.301, 7ನೇ ಮುಖ್ಯರಸ್ತೆ, 80 ಅಡಿ ರಸ್ತೆ, ಕಲ್ಯಾಣ ನಗರ, ಹೆಚ್.ಆರ್.ಬಿ.ಆರ್. ಲೇಔಟ್, ಇದರ ವಿದ್ಯುತ್ ಶುಲ್ಕ ಪಾವತಿ | 1,00,191–00 |
| 13) | ಅಡಿಗೆ ಅನಿಲ ಉಪಯೋಗ | 17,840/– |
| 14) | ಮನೆ ನಂ.301ಕ್ಕೆ ಕೇಬಲ್ ಮತ್ತು ಟಿ.ವಿ. ಸಂಪರ್ಕ | 1,525–00 |
| 15) | ದಿನಪತ್ರಿಕೆಗಳ ವೆಚ್ಚ | 6,300–00 |
| 16) | ಟೆಲಿಫೋನ್ ಸಂಪರ್ಕ ವೆಚ್ಚ | 1,60,340–00 |
| 17) | ಮನೆ ನಂ.612ರ ಬಾಡಿಗೆ | 1,05,600–00 |
| 18) | ವೈದ್ಯಕೀಯ ವೆಚ್ಚ | 47,078–28 |
| 19) | ಐ.ಸಿ.ಐ.ಸಿ.ಐ ಬ್ಯಾಂಕ್‌ಗೆ ಸಾಲ ಮರುಪಾವತಿ | 9,439–00 |
| 20) | ಜಿಪಿಎಫ್ ಸಾಲ ಮರುಪಾವತಿ | 14,000–00 |
| 21) | ಎಂ ಅಂಡ್ ಎಂ ಹಣಕಾಸು ಸಂಸ್ಥೆಯ ಸಾಲ ಮರುಪಾವತಿ | 3,72,350–00 |
| 22) | ಹೀರೋ ಹೋಂಡ ಕೆಎ 03–ಇಡಿ 7506 ಇದರ ವೆಚ್ಚ | 25,040–00 |
| 23) | ಗೆಟ್ಜ್ ಕಾರು ರಿಜಿಸ್ಟ್ರೇಷನ್ ಸಂಖ್ಯೆ: ಕೆಎ03–ಎಂಜಿ–1242 ಇದರ ವೆಚ್ಚ | 71,000–00 |
| 24) | ಮಾರುತಿ ಕಾರ್ ರಿಜಿಸ್ಟ್ರೇಷನ್ ಸಂಖ್ಯೆ: ಕೆಎ4–ಎ–1242 ಇದರ ವೆಚ್ಚ | 2,75,850–00 |
| 25) | ಕೆನೆಟಿಕ್ ಹೋಂಡ ರಿಜಿಸ್ಟ್ರೇಷನ್ ಸಂಖ್ಯೆ: ಕೆಎ03–ಇಬಿ–3329 ಇದರ ವೆಚ್ಚ | 27,376–00 |
| 26) | ಮಕ್ಕಳ ವಿದ್ಯಾಭ್ಯಾಸದ ಖರ್ಚು | 1,44,885–00 |
| 27) | ಮಕ್ಕಳ ಮದುವೆ ಖರ್ಚು | 6,670–00 |
| 28) | ನಿಂಡಿಯನ್ ಜಮಾಖಾನ ಸದಸ್ಯತ್ವ | 12,500–00 |
| 29) | ಆರೋಪಿತ ಅಧಿಕಾರಿಯವರು ಕಾಸ್ಮ ಪಾಲಿಟನ್ ಕ್ಲಬ್, ಕಲ್ಯಾಣ ನಗರ ಇದರ ಸದಸ್ಯತ್ವ | 10,000–00 |
| 30) | ಕರ್ನಾಟಕ ಕಮರ್ಷಿಯಲ್ ಟ್ಯಾಕ್ಸ್ ಅಧಿಕಾರಿಗಳ ಸೇವಾ ಸಂಘದ ಸದಸ್ಯತ್ವ | 1,010–00 |
| 31) | ಮನೆ ಕೆಲಸದವರ ವೆಚ್ಚ | 16,850/– |
| 32) | ಸಾಕು ನಾಯಿಯ ನಿರ್ವಹಣೆ ಮತು ವೆಚ್ಚ | 1,35,480–00 |
| 33) | ದೇವಸ್ಥಾನ ಮತ್ತು ಸಂಸ್ಥೆಗಳಿಗೆ ಆರೋಪಿತ ಅಧಿಕಾರಿಯಿಂದ ನೀಡಿರುವ ದಾನ ಅಥವಾ ಕೊಡುಗೆ | – |
| 34) | ಮಗಳ ಹೆರಿಗೆಗಾಗಿ ಯಾವುದೇ ವೆಚ್ಚವನ್ನು ಮಾಡಿರುವುದಿಲ್ಲ | – |
| 35) | ಕ್ರೆಡಿಟ್ ಮತ್ತು ಡೆಬಿಟ್ ಕಾರ್ಡ್‌ಗಳ ವೆಚ್ಚ | – |
| 36) | ಪಾಸ್‌ಪೋರ್ಟ್ ವೆಚ್ಚ | – |
| 37) | ಆರೋಪಿತ ಅಧಿಕಾರಿ ಹಾಗೂ ಅವರ ಕುಟುಂಬ ವರ್ಗದವರ ಪ್ರವಾಸ | – |
| 38) | ಆರೋಪಿತ ಅಧಿಕಾರಿಯವರು ಪಾವತಿಸಿರುವ ಆದಾಯ ತೆರಿಗೆ | 4,803–00 |
| 39) | ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳ ಖರೀದಿ | 2,900–00 |
| 40) | ಸತ್ಯನಾರಾಯಣಸ್ವಾಮಿ ಪೂಜೆ | 2,750–00 |
| | **ಒಟ್ಟು ವೆಚ್ಚ** | **53,69,552–28** |

**ಆದಾಯದ ವಿವರ**

| ಕ್ರ. ಸಂ. | ಆದಾಯದ ವಿವರಗಳು | ಮೌಲ್ಯ ರೂಪಾಯಿ |
|---|---|---|
| 1) | ಆರೋಪಿತ ಅಧಿಕಾರಿಯವರ ವೇತನದಿಂದ ಬಂದ ಆದಾಯ | 10,11,203–00 |
| 2) | ಕೃಷಿ ಆದಾಯ | 8,46,800–00 |
| 3) | ಕಟ್ಟಡ ಬಾಡಿಗೆ | 44,000–00 |
| 4) | ನಿವೇಶನ ಸಂಖ್ಯೆ: 616, ನಂದಿನಿ ಲೇಔಟ್, ಲಗ್ಗೆರೆ, ಬೆಂಗಳೂರು ಇದರ ಮಾರಾಟದಿಂದ ಬಂದ ಹಣ | 3,90,687–00 |
| 5) | ಭಾವನ ಹಳ್ಳಿ, ಸರ್ವೆ ನಂ.139 ಇದರ ಪಿತ್ರಾರ್ಜಿತ ಆಸ್ತಿ ಮಾರಾಟದಿಂದ | –– |
| 6) | ಆರೋಪಿತ ಅಧಿಕಾರಿಯವರ ತಂದೆ ಪಡೆದಿರುವ ಪರಿಹಾರ | 2,20,000–00 |
| 7) | ಮಾರುತಿ ಕಾರ್ ಸಂಖ್ಯೆ: ಕೆಎ4–ಎನ್–1242 ಇದರ ಮಾರಾಟ | 85,000–00 |
| 8) | ಎಂ.ಎಂ.ಸಂಸ್ಥೆಯಿಂದ ಪಡೆದಿರುವ ಸಾಲ | 2,70,000–00 |
| 9) | ಜೆಪಿಎಫ್ ಲೆಕ್ಕದಿಂದ ಭಾಗಶಃ ಹಣ ಪಡೆದಿರುವುದು | – |
| 10) | ಜಿಪಿಎಫ್ ಸಾಲ | 25,000–00 |
| 11) | ಆರೋಪಿತ ಅಧಿಕಾರಿಯವರ ತಂದೆ ವಿಜಯಾ ಬ್ಯಾಂಕ್‌ನಿಂದ ಪಡೆದಿರುವ ಸಾಲ | 8,00,000–00 |
| 12) | ಐ.ಸಿ.ಐ.ಸಿ.ಐ. ಬ್ಯಾಂಕ್‌ನಿಂದ ಸಾಲ | 1,00,000–00 |
| 13) | ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್‌ನ ಮೆಚ್ಯುರಿಟಿಯಿಂದ ಬಂದ ಹಣ | 15,729–30 |
| 14) | ಬ್ಯಾಂಕ್ ಖಾತೆಗಳಿಂದ ಬಂದಿರುವ ಬಡ್ಡಿ | 5,852–12 |
| 15) | ವಿದೇಶಗಳಿಂದ ಆದಾಯ, ಸಾಲಗಳು, ಉಡುಗೊರೆ ಇತ್ಯಾದಿ | – |
| 16) | ಸ್ನೇಹಿತರು, ಬಂಧುಗಳ ಮದುವೆ ಹಾಗೂ ಇತರೇ ಸಮಾರಂಭಗಳಿಂದ ಬಂದ ಉಡುಗೊರೆ | – |
| 17) | ಇಲಾಖೆ ಹಾಗೂ ಇತರೇ ಇಂದ ಬಂದ ಬಹುಮಾನ | – |
| | **ಕುಟುಂಬ ಸದಸ್ಯರ ಗಳಿಕೆ** | |
| 18) | ಶ್ರೀ ಎನ್.ಡಿ.ವೆಂಕಟೇಶ್ ಬಾಬು (ಆರೋಪಿತ ಅಧಿಕಾರಿಯವರ ಮಗ) ಇವರಿಂದ ಬಂದ | 44,960–00 |
| 19) | ಆರೋಪಿತ ಅಧಿಕಾರಿಯವರ ಅಳಿಯ ಇವರ ಗಳಿಕೆ | 18,380–00 |
| | ಶ್ರೀಮತಿ ಆಶಾ ಕಿರಣ್ (ಆರೋಪಿತ ಅಧಿಕಾರಿಯವರ ಮಗಳು) ಇವರ ಉದ್ಯೋಗ ಕುರಿತು ಹೆಚ್.ಡಿ.ಎಫ್.ಸಿ. ಮತ್ತು ಸ್ಟ್ಯಾಂಡರ್ಡ್ ಚಾರ್ಟರ್ಡ್ ಬ್ಯಾಂಕುಗಳಿಂದ ಯಾವುದೇ ಅಧಿಕೃತ ಮಾಹಿತಿ ಬಂದಿರುವುದಿಲ್ಲ | – |
| | **ಒಟ್ಟು ಆದಾಯ** | **28,57,891–42** |

**ಆರೋಪಿತ ಅಧಿಕಾರಿಯವರು ಗಳಿಸಿರುವ ಹೆಚ್ಚುವರಿ ಸಂಪತ್ತು**

| | |
|---|---|
| ಒಟ್ಟು ಆಸ್ತಿ | ರೂ.30,69,267.56 |
| ಒಟ್ಟು ವೆಚ್ಚ | ರೂ. 53,69,552.28 |
| ಆಸ್ತಿ ಮತ್ತು ವೆಚ್ಚ | ರೂ. 84,38,819.84 |
| ಒಟ್ಟು ಆದಾಯ | ರೂ. 28,57,891.42 |
| ಹೆಚ್ಚುವರಿ ಸಂಪತ್ತು | ರೂ. 55,80,928.42 |

$$\frac{55,80,928.42}{28,57,891.42} \times 100 = 195.28\%$$

ತನಿಖಾಧಿಕಾರಿಯು ಸಲ್ಲಿಸಿರುವ ಅಂತಿಮ ವರದಿ ಮತ್ತು ದಾಖಲೆಗಳನ್ನು ಒಳಗೊಂಡ ಕಡತಗಳನ್ನು ಸರ್ಕಾರದ ಹಂತದಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಮೇಲ್ಕಂಡಂತೆ ಆಪಾದಿತ ಸರ್ಕಾರಿ ಅಧಿಕಾರಿ ಶ್ರೀ ಎನ್.ದೇವಾನಂದಬಾಬು, ವಾಣಿಜ್ಯ ತೆರಿಗೆ ಅಧಿಕಾರಿ, ಇವರು ದಿನಾಂಕ:17.6.1992 ರಿಂದ ಶೋಧನಾ ದಾಳಿ ನಡೆಸಿದ ದಿನಾಂಕ: 10.08.2005 ರವರೆಗಿನ ಅವಧಿಗೆ ಚೆಕ್ ಅವಧಿಯೆಂದು ಈ ಅವಧಿಯಲ್ಲಿ ಆಪಾದಿತರು ಮಾಡಿರುವ ಒಟ್ಟು ಖರ್ಚು ವೆಚ್ಚ 53,69,552.28 ಗಳಾಗಿರುತ್ತವೆ. ಆಪಾದಿತ ಅಧಿಕಾರಿಯು ತಮ್ಮ ಚೆಕ್ ಅವಧಿಯಲ್ಲಿ ಹೊಂದಿರುವ ಆದಾಯದ ಒಟ್ಟು ಮೊತ್ತ

ರೂ.28,57,891.42 ಗಳಾಗಿದ್ದು, ಆಪಾದಿತ ಅಧಿಕಾರಿಯು ತಮ್ಮ ಆದಾಯಕ್ಕಿಂತ ಹೆಚ್ಚಿಗೆ ಹೊಂದಿದ ಆಸ್ತಿ ಮತ್ತು ಖರ್ಚು ವೆಚ್ಚಗಳ ಒಟ್ಟು ಮೊತ್ತ 84,38,819.84 ಗಳಾಗಿರುತ್ತದೆ. ಅಂದರೆ ಆಪಾದಿತ ಸಾರ್ವಜನಿಕ ಅಧಿಕಾರಿ ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತಲೂ ಶೇ.195.28 ರಷ್ಟು ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡುಬರುತ್ತದೆ. ಇದಕ್ಕೆ ಆಪಾದಿತರ ಬಳಿ ಯಾವುದೇ ಸಮಾಧಾನಕರ ವಿವರಣೆ ಅಥವಾ ಲೆಕ್ಕ ಲಭ್ಯವಿರುವುದಿಲ್ಲ.

ಆದ್ದರಿಂದ ಶ್ರೀ ಎನ್. ದೇವಾನಂದಬಾಬು, ವಾಣಿಜ್ಯ ತೆರಿಗೆ ಅಧಿಕಾರಿ, ಇವರು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ)ರ ಜೊತೆ ಕಲಂ 13(2)ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಆಪಾದಿತ ಸರ್ಕಾರಿ ನೌಕರರು ತಮ್ಮ ಎಲ್ಲ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಆಸ್ತಿಯನ್ನು ಗಳಿಸಿ, ಅಪರಾಧಿಕ ದುರ್ನಡತೆ ಎಸಗಿರುವುದರಿಂದ ಸದರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸುವುದು ಅತ್ಯವಶ್ಯಕವಾಗಿರುತ್ತದೆಂದು ಸರ್ಕಾರಕ್ಕೆ ಸ್ಪಷ್ಟವಾಗಿ ಮನವರಿಕೆಯಾಗಿರುತ್ತದೆ.

ಆಪಾದಿತ ಅಧಿಕಾರಿಯು ಗ್ರೂಪ್ 'ಬಿ' ವೃಂದವಾದ ವಾಣಿಜ್ಯ ತೆರಿಗೆ ಅಧಿಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ನಿಯಮ 9(1) ರನ್ವಯ ಸರ್ಕಾರವು, ಆಪಾದಿತರನ್ನು ಕೆಲಸದಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಸಿ) ರನ್ವಯ ಸರ್ಕಾರವು ಆಪಾದಿತ ಅಧಿಕಾರಿಯನ್ನು ಲಂಚ ನಿರೋಧಕ ಕಾಯ್ದೆ, 1988ರ ಕಲಂ 13(1)(ಇ)ರ ಜೊತೆಗೆ ಕಲಂ 13(2) ಅಡಿಯಲ್ಲಿ ಅಭಿಯೋಗಗೊಳಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 50 ವಾತೆತ 2005, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಎನ್.ದೇವಾನಂದ ಬಾಬು, ವಾಣಿಜ್ಯ ತೆರಿಗೆ ಅಧಿಕಾರಿ, ವಾಣಿಜ್ಯ ತೆರಿಗೆ ಇಲಾಖೆ, ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಲಂಚ ನಿರೋಧಕ ಕಾಯ್ದೆ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ–19 ರನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 29.12.2008 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 307

**ಮಹಬೂಬ್ ಖಾನ್**

ಪೀಠಾಧಿಕಾರಿ, ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** 2008–09ನೇ ಸಾಲಿಗೆ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್, ಬೆಂಗಳೂರು, ಇವರಿಗೆ ರೂ.9.80 ಲಕ್ಷ ಅನುದಾನ ಮಂಜೂರಾತಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ:ಲಾ 210 ಎಲ್‌ಸಿಎಲ್ 2002 ದಿನಾಂಕ: 10.07.2003.
2. ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಹೆಚ್‌ಸಿಬಿ/230/1983 ದಿನಾಂಕ: 12.09.08 ಮತ್ತು 30.10.08.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ: 10.07.2003ರ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ ರೂ.9.80 ಲಕ್ಷಗಳನ್ನು ನಿಗದಿಗೊಳಿಸಿ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ನಿಯಮಗಳನ್ವಯ ನೀಡುವ ಸಹಾಯಾನುದಾನ ನಿಯಮಾವಳಿಗಳಿಗೆ ತಿದ್ದುಪಡಿ (Amendment) ತರಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 12.09.08 ಮತ್ತು ದಿನಾಂಕ: 30.10.2008ರ ಪತ್ರಗಳಲ್ಲಿ ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ ಈ ಕೆಳಕಂಡ ಉದ್ದೇಶಗಳಿಗಾಗಿ ರೂ.10.00 ಲಕ್ಷಗಳ ಸಹಾಯಾನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ, ಮತ್ತು ಸದರಿ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಪಟ್ಟಿಯಲ್ಲಿನ ಲೆಕ್ಕ ಶೀರ್ಷಿಕೆ 2014–00–800–4–00–059– ಇತರೆ ವೆಚ್ಚಗಳು ಅಡಿಯಲ್ಲಿ ಅವಕಾಶ ಕಲ್ಪಿಸಿಕೊಂಡಿರುವುದಾಗಿ ತಿಳಿಸಿದ್ದಾರೆ.

1. ಕಿರಿಯ ವಕೀಲರುಗಳಿಗೆ ಕಾನೂನು ಕಮ್ಮಟ:ಕಾರ್ಯಾಗಾರ ಹಾಗೂ ವಕೀಲರುಗಳಿಗೆ ತರಬೇತಿ ನೀಡಲು.

2. ಸೆಮಿನಾರ್ ಮತ್ತು ಕಾನೂನು ಶಿಕ್ಷಣ ಕಾರ್ಯಕ್ರಮಗಳಿಗಾಗಿ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆ ದಿನಾಂಕ: 10.07.2003ರ ತಿದ್ದುಪಡಿಯಲ್ಲಿ ಸದರಿ ಉದ್ದೇಶಕ್ಕಾಗಿ ನಿಗದಿಗೊಳಿಸಿರುವಂತೆ ರೂ.9.80 ಲಕ್ಷಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂ. ಲಾ 124 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ: 7ನೇ ಜನವರಿ 2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ 2008–09ನೇ ಸಾಲಿಗೆ ರೂ.9.80 ಲಕ್ಷಗಳ (ರೂಪಾಯಿ ಒಂಭತ್ತು ಲಕ್ಷದ ಎಂಭತ್ತು ಸಾವಿರ ಮಾತ್ರ) ಸಹಾಯಾನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ,

ಸದರಿ ಮೊತ್ತವನ್ನು ಮೇಲಿನ ಉದ್ದೇಶಗಳಿಗಾಗಿ ಮಾತ್ರ ವಿನಿಯೋಗಿಸತಕ್ಕದ್ದು.

2008–09ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗುವ ಮೊತ್ತಕ್ಕೆ ಬಳಕೆಯ ಪ್ರಮಾಣ ಪತ್ರವನ್ನು (Utilization Certificate) ಅಡ್ವೋಕೇಟ್ ಜನರಲ್ (ಸಕ್ಷಮ ಪ್ರಾಧಿಕಾರದ)ರವರ ಮೇಲು ರುಜುವಿನೊಂದಿಗೆ ಸಲ್ಲಿಸುವ ಷರತ್ತಿಗೊಳಪಟ್ಟಿದೆ.

ಈ ಸಹಾಯಾನುದಾನವನ್ನು ಲೆಕ್ಕ ಶೀರ್ಷಿಕೆ 2014–00–800–4–00–ನ್ಯಾಯಾಲಯದ ನೌಕರರಿಗಾಗಿ ತರಬೇತಿ ಸಂಸ್ಥೆ ಉಪ ಶೀರ್ಷಿಕೆ 059–ಇತರೆ ಖರ್ಚು ಇದರಡಿಯ ಯೋಜನೇತರ ಬಾಬ್ತಿನಲ್ಲಿ ಒದಗಿಸಲಾದ ಹಣದಿಂದ ಭರಿಸತಕ್ಕದ್ದು.

ಇದನ್ನು ಆಂತರಿಕ ಆರ್ಥಿಕ ಸಲಹೆಗಾರರು, ವಸತಿ, ನಗರಾಭಿವೃದ್ಧಿ, ಕಾನೂನು ಮತ್ತು ಇ–ಆಡಳಿತ ಇಲಾಖೆ ರವರ ಟಿಪ್ಪಣಿ ಸಂಖ್ಯೆ:ವನಇ 440 ಆಂಆಸ 2008, ದಿನಾಂಕ: 10.12.08ರ ಸಹಮತಿ ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ದಿನಾಂಕ:20.01.2003ರ ಆದೇಶ ಸಂಖ್ಯೆ:ಆಇ 01 ಟಿಎಫ್‌ಪಿ 2002ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 313

**ಸಹಕಾರ ಸಚಿವಾಲಯ**

**ವಿಷಯ:** ಶ್ರೀ ಗುರುಸಿದ್ದೇಶ್ವರ ವಿದ್ಯಾವರ್ಧಕ ಸಂಘ, ಹಾವೇರಿ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಬೆಂಗಳೂರು ರವರ ವರದಿ ಸಂಖ್ಯೆ:ಆರ್‌ಸಿಎಸ್/164/ಸಸಂನೇ/ಸಿಆರ್/2008–09 ದಿನಾಂಕ:04–11/12/2008.

**ಪ್ರಸ್ತಾವನೆ:**

ಮೇಲೆ ಓದಲಾದ ಸಹಕಾರ ಸಂಘಗಳ ಅಪರ ನಿಬಂಧಕರು, ಪತ್ರದಲ್ಲಿ ಶ್ರೀ ಗುರುಸಿದ್ದೇಶ್ವರ ವಿದ್ಯಾವರ್ಧಕ ಸಂಘ, ಹಾವೇರಿ, ಈ ಸಂಸ್ಥೆಯು 2001–02 ರಲ್ಲಿ ನೋಂದಣಿಯಾಗಿರುತ್ತದೆ. ಶ್ರೀಮತಿ ಬಿ.ಎಂ. ಶಂಕರಮ್ಮ ಇವರು ಸಂಸ್ಥಾಪಕ ಅಧ್ಯಕ್ಷರಾಗಿರುತ್ತಾರೆ. ಸದರಿ ಸಂಸ್ಥೆಯು ಕೈಗಾರಿಕಾ ತರಬೇತಿ ಸಂಸ್ಥೆಯನ್ನು ನಿರ್ವಹಿಸುತ್ತಿದ್ದು, ಸಂಸ್ಥೆಯ ಕಾರ್ಯಕಾರಿ ಮಂಡಳಿಯ ಸದಸ್ಯರಾದ ಶ್ರೀಮತಿ ಗಿರಿಜಾ ಕಾಪ್ಸೆ ರವರು ಸದರಿ ತರಬೇತಿ ಸಂಸ್ಥೆಗೆ ಪ್ರಭಾರ ಪ್ರಾಂಶುಪಾಲರಾಗಿರುತ್ತಾರೆ. ಜಂಟಿ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ಸಂಸ್ಥೆಯ ತನಿಖೆ ಮಾಡಿ ವಿದ್ಯಾರ್ಹತೆ ಹೊಂದಿಲ್ಲದೆ ಇರುವ ಶ್ರೀಮತಿ ಗಿರಿಜಾ ಕಾಪ್ಸೆ ರವರನ್ನು ತೆಗೆದು ಹಾಕಿ ಆ ಹುದ್ದೆಗೆ ಅರ್ಹರಾದವರನ್ನು ನೇಮಿಸಲು ಅಧ್ಯಕ್ಷರವರಿಗೆ ತಿಳಿಸಿರುವುದರಿಂದ, ಅಧ್ಯಕ್ಷರು, ಪ್ರಭಾರ ಪ್ರಾಂಶುಪಾಲರಿಗೆ ನೋಟೀಸು ನೀಡಿ ಹುದ್ದೆಯಿಂದ ತೆಗೆದು ಹೊಸ ಪ್ರಾಚಾರ್ಯರನ್ನು ನೇಮಕ ಮಾಡಿರುತ್ತಾರೆ. 2001–02 ರಿಂದ 2004–05 ರವರೆಗೆ ಶ್ರೀಮತಿ ಶಂಕರಮ್ಮ ಇವರು ಸಂಸ್ಥೆಯ ಅಧ್ಯಕ್ಷರಾಗಿರುತ್ತಾರೆ.

ಈ ಮಧ್ಯೆ 2005–06ನೇ ಸಾಲಿನ ನವೀಕರಣಕ್ಕಾಗಿ ಲೆಕ್ಕಪತ್ರಗಳನ್ನು ಹಾಜರುಪಡಿಸಿದ ದಾಖಲಾತಿಗಳ ವಿರುದ್ಧ ಶ್ರೀಮತಿ ಗಿರಿಜಾ ಕಾಪ್ಸೆ ರವರು ಹಾಗೂ ಇತರರು ಸಲ್ಲಿಸಿರುವ ದೂರು ಅರ್ಜಿಯ ಕುರಿತು ಜಿಲ್ಲಾ ನೋಂದಣಾಧಿಕಾರಿಗಳು ಹಾವೇರಿ ಇವರು ಕಲಂ 25(1) ರನ್ವಯ ವಿಚಾರಣೆ ಮಾಡಿ ಶ್ರೀಮತಿ ಗಿರಿಜಾ ಕಾಪ್ಸೆ ರವರು ನಡೆಸಿದ ಸರ್ವ ಸದಸ್ಯರ ಸಭೆಯ ನಡವಳಿಗಳನ್ನು ಒಪ್ಪಿ ಇವರ ಆಡಳಿತ ಮಂಡಳಿ ಅಧಿಕೃತ ಎಂದು ಆದೇಶಿಸಿದ್ದರ ವಿರುದ್ಧ ಶ್ರೀಮತಿ ಶಂಕರಮ್ಮ ರವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:5054/2006 ರನ್ನು ದಾಖಲಿಸಿದ್ದು, ದಿನಾಂಕ:23/03/2006 ರಂದು ನೋಂದಣಾಧಿಕಾರಿಗಳನ್ನು ತಳ್ಳಿ ಹಾಕಿ ಪ್ರಕರಣ ಮರು ಪರಿಶೀಲಿಸಿ ಆದೇಶಿಸಿದೆ. ಅದರಂತೆ ಉಭಯ ಅರ್ಜಿದಾರರಿಗೂ ನೋಟೀಸು ನೀಡಿ ವಿಚಾರಣೆ ನಡೆಸಿ ಉಭಯ ಅರ್ಜಿದಾರರಿಗೆ ಸಂಸ್ಥೆಯ ಕಾಳಜಿ ಇಲ್ಲದೆ ಇರುವುದರಿಂದ ಶ್ರೀ ಗುರುಸಿದ್ದೇಶ್ವರ ವಿದ್ಯಾವರ್ಧಕ ಸಂಘ ಹಾವೇರಿ ಇದಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 ಎ(1) ರಡಿಯಲ್ಲಿ ಆಡಳಿತಾಧಿಕಾರಿಯವರನ್ನು ನೇಮಿಸಲು ಶಿಫಾರಸ್ಸು ಮಾಡಿರುತ್ತಾರೆ.

ಅದರಂತೆ, ಉಭಯ ಅರ್ಜಿದಾರರುಗಳು ಸಂಸ್ಥೆಯ ಅಭಿವೃದ್ಧಿ ಬಗ್ಗೆ ಕಾಳಜಿ ಇಲ್ಲದೇ ಇರುವುದರಿಂದ ಸದರಿ ಶ್ರೀ ಗುರು ಸಿದ್ದೇಶ್ವರ ವಿದ್ಯಾವರ್ಧಕ ಸಂಘ ಹಾವೇರಿ ಇದಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 ಎ(1)(ಸಿ) ರನ್ವಯ 6 ತಿಂಗಳ ಅವಧಿಗೆ ಆಡಳಿತಗಾರರನ್ನು ನೇಮಕ ಮಾಡಿ ಸದರಿ ಅವಧಿಯಲ್ಲಿ ಸಂಸ್ಥೆ ಹಾಲಿ ಇರುವ ಸದಸ್ಯರುಗಳ ಚುನಾವಣೆ ನಡೆಸಿ ಹೊಸ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡಲು ಆಡಳಿತಾಧಿಕಾರಿಯವರಿಗೆ ಸೂಚನೆ ನೀಡಬಹುದು ಎಂದು ತಿಳಿಸಿರುತ್ತಾರೆ. ಜಿಲ್ಲಾ ನೋಂದಣಾಧಿಕಾರಿಯವರ ವರದಿಯನ್ನು ಪರಿಶೀಲಿಸಿದಾಗ ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಇ 123 ಸಸಂನೋ 2008, ಬೆಂಗಳೂರು, ದಿನಾಂಕ: 29ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಗುರು ಸಿದ್ದೇಶ್ವರ ವಿದ್ಯಾವರ್ಧಕ ಸಂಘ ಹಾವೇರಿ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ(1)(ಸಿ) ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಸಹಕಾರಿ ಸಂಘಗಳ ಉಪ ನಿಬಂಧಕರು ಹಾವೇರಿ ಜಿಲ್ಲೆ ಇವರನ್ನು ಆಡಳಿತಾಧಿಕಾರಿಯಾಗಿ 6 (ಆರು) ತಿಂಗಳ ಅವಧಿಗೆ ಅಥವಾ ಸದರಿ ಅವಧಿಯಲ್ಲಿ ಸಂಘದಲ್ಲಿ ಹಾಲಿ ಇರುವ ಸದಸ್ಯರಿಂದ ಸಂಘಕ್ಕೆ ಚುನಾಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಂಜುಂಡಪ್ಪ**

ಪಿ.ಆರ್. 403 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಹೆಚ್.ಎಸ್. ನಾಗರಾಳ್, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪನಿರ್ದೇಶಕರು, ಭೂದಾಖಲೆಗಳ ವಿಭಾಗ, ಜಿಲ್ಲಾಧಿಕಾರಿಗಳ ಕಛೇರಿ ಧಾರವಾಡ (ಹಾಲಿ ಅಮಾನತ್ತಿನಲ್ಲಿ)ರವರ ವಿರುದ್ಧ 1944ರ ಕ್ರಿಮಿನಲ್ ಲಾ (ಅಮೆಂಡ್‌ಮೆಂಟ್) ಆರ್ಡಿನೆನ್ಸ್ ಕಲಂ 3ರಡಿಯಲ್ಲಿ ಆರೋಪಿತರ ಸ್ಥಿರ ಮತ್ತು ಚರಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಸಂಬಂಧ ಅನುಜ್ಞಾ ಪತ್ರವನ್ನು ನೀಡುವ ಬಗ್ಗೆ.

**ಓದಲಾಗಿದೆ:** ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ)/ಎಲ್–36 ಸಿಆರ್–03/2007 ಧಾರವಾಡ ದಿನಾಂಕ: 25.08.2008.

**ಪ್ರಸ್ತಾವನೆ:**

ಶ್ರೀ ಹೆಚ್.ಎಸ್. ನಾಗರಾಳ್, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪನಿರ್ದೇಶಕರು, ಭೂದಾಖಲೆಗಳ ವಿಭಾಗ, ಜಿಲ್ಲಾಧಿಕಾರಿಗಳ ಕಛೇರಿ ಧಾರವಾಡ (ಹಾಲಿ ಅಮಾನತ್ತಿನಲ್ಲಿ) ಇವರು ಗೊತ್ತಾದ ಆದಾಯಕ್ಕಿಂತ ಹೆಚ್ಚಿನ ಚರ ಮತ್ತು ಸ್ಥಿರಾಸ್ತಿಗಳು ಅಕ್ರಮವಾಗಿ ಗಳಿಸಿರುತ್ತಾರೆಂಬ ಖಚಿತ ಮಾಹಿತಿಯ ಮೇರೆಗೆ ಸದರಿಯವರ ವಿರುದ್ಧ ಧಾರವಾಡ ಲೋಕಾಯುಕ್ತ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ 3/2007ನ್ನು ದಿನಾಂಕ: 24.8.2007ರಂದು ಪ್ರಕರಣವನ್ನು ದಾಖಲಿಸಿ ದಿನಾಂಕ: 25.12.2007ರಂದು ಪಂಚರುಗಳ ಸಮಕ್ಷಮ ಆರೋಪಿತರಿಗೆ ಸಂಬಂಧಿಸಿದ ಮನೆ/ಕಟ್ಟಡಗಳು/ಕಛೇರಿ ಇತ್ಯಾದಿ ಸ್ಥಳಗಳ ಪರಿಶೋಧನೆಯನ್ನು ಲೋಕಾಯುಕ್ತ ಪೊಲೀಸರು ಮಾಡಿದ್ದು ಪ್ರಕರಣದ ಮುಂದಿನ ತನಿಖೆ ಕೈಗೊಂಡಿರುತ್ತಾರೆ. ಪ್ರಕರಣದ ಈವರೆಗಿನ ತನಿಖೆಯಿಂದ ಆರೋಪಿತ ಅಧಿಕಾರಿ ಶ್ರೀ ಹೆಚ್.ಎಸ್. ನಾಗರಾಳ ತಮ್ಮ ಗೊತ್ತಾದ ಆದಾಯಕ್ಕಿಂತ ಹೆಚ್ಚಿನ ಚರ ಮತ್ತು ಸ್ಥಿರ ಆಸ್ತಿಗಳನ್ನು ಹೊಂದಿರುವುದು ದೃಢಪಟ್ಟಿದ್ದು ಇದರ ವಿವರಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿದೆ. ಸದರಿ ಚರ ಮತ್ತು ಸ್ಥಿರ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಅವಶ್ಯಕತೆ ಇರುತ್ತದೆ. ಎಂದು, ಈ ಬಗ್ಗೆ ತನಿಖಾಧಿಕಾರಿಯು ಸಕ್ಷಮ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬೇಕಾಗಿದ್ದು ಈ ಸಂಬಂಧವಾಗಿ ದಿ ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆರ್ಡಿನೆನ್ಸ್ 1944ರ ಕಲಂ–3ರಡಿ ಅನುಜ್ಞಾ ಪತ್ರವನ್ನು ತನಿಖಾಧಿಕಾರಿಗೆ ನೀಡುವಂತೆ ಮೇಲೆ ಓದಲಾದ ದಿನಾಂಕ: 25.8.2008ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿರುವರು.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಗೊತ್ತಾದ ಆದಾಯಕ್ಕಿಂತ ಹೆಚ್ಚಾಗಿ ಹೊಂದಿರುವ ಚರ ಮತ್ತು ಸ್ಥಿರ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 23 ಭೂದಾಸೇ(1)2008, ಬೆಂಗಳೂರು, ದಿನಾಂಕ: 21ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್.ಎಸ್. ನಾಗರಾಳ್, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪನಿರ್ದೇಶಕರು, ಭೂದಾಖಲೆಗಳ ವಿಭಾಗ, ಜಿಲ್ಲಾಧಿಕಾರಿಗಳ ಕಛೇರಿ ಧಾರವಾಡ (ಹಾಲಿ ಅಮಾನತ್ತಿನಲ್ಲಿ) ಇವರು ಗೊತ್ತಾದ ಆದಾಯ ಮೂಲಕ್ಕಿಂತ ಹೆಚ್ಚು ಚರ ಮತ್ತು ಸ್ಥಿರ ಆಸ್ತಿಗಳನ್ನು ಅಕ್ರಮವಾಗಿ ಗಳಿಸಿರುವ ಮಾಹಿತಿಯನ್ನಾಧರಿಸಿ ಕರ್ನಾಟಕ ಲೋಕಾಯುಕ್ತ ಪೊಲೀಸರು ಸದರಿಯವರ ವಿರುದ್ಧ ಧಾರವಾಡ ಲೋಕಾಯುಕ್ತ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ 3/2007ನ್ನು ದಿನಾಂಕ: 24.08.2007 ರಂದು ದಾಖಲಿಸಿ ದಿನಾಂಕ: 25.12.2007ರಂದು ಪಂಚರ ಸಮಕ್ಷಮ ಆರೋಪಿತರಿಗೆ ಸಂಬಂಧಿಸಿದ ಮನೆ/ಕಟ್ಟಡಗಳು/ಕಛೇರಿ ಇತ್ಯಾದಿ ಸ್ಥಳಗಳ ಪರಿಶೋಧನೆ ಮಾಡಿದಾಗ ಗೊತ್ತಾದ ಆದಾಯಕ್ಕಿಂತ ಹೆಚ್ಚಿನ ಸಂಪತ್ತು ಹೊದಿರುವುದು ಕಂಡುಬಂದಿದ್ದು, ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿರುವ ವಿವರಗಳುಳ್ಳ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಸಂಬಂಧ, ಸಂಬಂಧಪಟ್ಟ ತನಿಖಾಧಿಕಾರಿಯು ಘನ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬೇಕಾಗಿದ್ದು ಈ ಸಂಬಂಧ ದಿ ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆರ್ಡಿನೆನ್ಸ್ 1944ರ ಕಲಂ–3ರಡಿ ಇವುಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಸಲುವಾಗಿ, ಸಕ್ಷಮ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಲು ಈ ಮೂಲಕ ಸರ್ಕಾರದ ಅನುಮೋದನೆಯನ್ನು ಕರ್ನಾಟಕ ಲೋಕಾಯುಕ್ತ ಕಛೇರಿಯ ಅಪರ ಪೊಲೀಸ್ ಮಹಾ ನಿರ್ದೇಶಕರವರಿಗೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ)

**ಸರ್ಕಾರಿ ಆದೇಶ ಸಂಖ್ಯೆ: ಕಂಇ 23 ಭೂದಾಸೆ(1) 2008, ದಿನಾಂಕ: 21.1.2009ಕ್ಕೆ**

**ಅನುಬಂಧ**

**(ಶ್ರೀ ಹೆಚ್.ಎಸ್. ನಾಗರಾಳ, ಡಿ.ಡಿ.ಎಲ್.ಆರ್. ರವರ ಆಸ್ತಿ ವಿವರ)**

| ಕ್ರ ಸಂ. | ಆಸ್ತಿಯ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 1. | ಗದಗ ಸರ್ವೆ ನಂ.203, ಫ್ಲಾಟ್ ನಂ.39ರಲ್ಲಿರುವ ವಾಸದ ಮನೆ ಆರೋಪಿತರ ಮಾವ ಶ್ರೀ ಫಕೀರಗೌಡ ಬಿ.ಪಾಟೀಲ್ ರವರ ಹೆಸರಿನಲ್ಲಿರುತ್ತದೆ. | 30,00,000/– |
| 2. | ಧಾರವಾಡದ ರಾಣಿಚೆನ್ನಮ್ಮ ನಗರದ ಫ್ಲಾಟ್ ನಂ.124, 125ರಲ್ಲಿರುವ "ಶಿವಚೇತನ" ವಾಸದ ಮನೆ ಆರೋಪಿತರ ಹೆಸರಿನಲ್ಲಿರುತ್ತದೆ | 35,00,000/– |
| 3. | ಧಾರವಾಡದ ರಾಣಿಚೆನ್ನಮ್ಮ ನಗರದ ಫ್ಲಾಟ್ ನಂ.123 ಆರೋಪಿತರ ಮಗ ಶ್ರೀ ಶಿವರಾಜ್ ಹೆಚ್.ನಾಗರಾಳ ರವರ ಹೆಸರಿನಲ್ಲಿರುತ್ತದೆ | 18,500/– |
| 4. | ಚಿನ್ನ ಮತ್ತು ಬೆಳ್ಳಿ ಆಭರಣಗಳು ಆರೋಪಿತರ ಮತ್ತು ಅವರ ಕುಟುಂಬದವರ ಹೆಸರಿನಲ್ಲಿರುತ್ತದೆ | 5,62,049/– |
| 5. | ಹೀರೇಮಣ್ಣೂರಿನ ಸರ್ವೆ ನಂ.67ರ 16.02 ಎಕರೆ ಜಮೀನು ಆರೋಪಿತರ ಮಾವ ಶ್ರೀ ಫಕೀರಗೌಡ ಬಿ.ಪಾಟೀಲ್ ಹೆಸರಿನಲ್ಲಿದ್ದು, ಆರೋಪಿತರ ಮಗ ಶ್ರೀ ರವಿರಾಜ ರವರ ಹೆಸರಿಗೆ ವರ್ಗಾವಣೆಯಾಗಿರುತ್ತದೆ. | 40,000/– |
| 6. | ಹೀರೇಮಣ್ಣೂರಿನ ಸರ್ವೆ ನಂ.90/1+2/1, 5–00 ಎಕರೆ 16–02 ಎಕರೆ ಆರೋಪಿತರ ಮಾವ ಶ್ರೀ ಫಕೀರಗೌಡ ಬಿ.ಪಾಟೀಲ್ ಹೆಸರಿನಲ್ಲಿದ್ದು, ಆರೋಪಿತರ ಮಗ ಶ್ರೀ ಆಕಾಶ ರವರ ಹೆಸರಿಗೆ ವರ್ಗಾವಣೆಯಾಗಿರುತ್ತದೆ | 45,000/– |
| 7. | ಹೀರೇಮಣ್ಣೂರಿನ ಸರ್ವೆ ನಂ.90/1+2/2, 7.17 ಎಕರೆ ಆರೋಪಿತರ ಮಾವ ಶ್ರೀ ಫಕೀರಗೌಡ ಬಿ.ಪಾಟೀಲ್ ಹೆಸರಿನಲ್ಲಿರುತ್ತದೆ. | 1,42,000/– |
| 8. | ಹೀರೇಮಣ್ಣೂರಿನ ಸರ್ವೆ ನಂ.87/1ಬಿ, 5.14 ಎಕರೆ ಆರೋಪಿತರ ಮಾವ ಶ್ರೀ ಫಕೀರಗೌಡ ಬಿ.ಪಾಟೀಲ್ ಹೆಸರಿನಲ್ಲಿದ್ದು, ಆರೋಪಿತರ ಹೆಂಡತಿ ಶ್ರೀಮತಿ ಚೆನ್ನಮ್ಮ ರವರ ಹೆಸರಿಗೆ ವರ್ಗಾವಣೆಯಾಗಿರುತ್ತದೆ | 1,32,000/– |
| 9. | ಹೀರೇಮಣ್ಣೂರಿನ ಸರ್ವೆ ನಂ.68/1ಬಿ, 14.20 ಎಕರೆ ಆರೋಪಿತರ ಮಾವ ಶ್ರೀ ಫಕೀರಗೌಡ ಬಿ.ಪಾಟೀಲ್ ಹೆಸರಿನಲ್ಲಿದ್ದು, ಆರೋಪಿತರ ಮಗ ಶ್ರೀ ರವಿರಾಜ ರವರ ಹೆಸರಿಗೆ ವರ್ಗಾವಣೆಯಾಗಿರುತ್ತದೆ | 1,00,000/– |

| ಕ್ರ. ಸಂ. | ಆಸ್ತಿಯ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 10. | ಹೀರೆಮಣ್ಣೂರಿನ ಸರ್ವೆ ನಂ.17/1ಎ, 8.08 ಎಕರೆ ಆರೋಪಿತರ ಮಾವ ಶ್ರೀ ಫಕೀರಗೌಡ ಬಿ.ಪಾಟೀಲ್ ಹೆಸರಿನಲ್ಲಿರುತ್ತದೆ. | 55,000/– |
| 11. | ಹೀರೆಮಣ್ಣೂರಿನ ಸರ್ವೆ ನಂ.170/2, 7.05 ಎಕರೆ ಆರೋಪಿತರ ಮಾವ ಶ್ರೀ ಫಕೀರಗೌಡ ಬಿ.ಪಾಟೀಲ್ ಹೆಸರಿನಲ್ಲಿರುತ್ತದೆ. | 55,000/– |
| 12. | ಹೀರೆಮಣ್ಣೂರಿನ ಸರ್ವೆ ನಂ.87/1ಎ, 5.00 ಎಕರೆ ಆರೋಪಿತರ ಮಾವ ಶ್ರೀ ಫಕೀರಗೌಡ ಬಿ.ಪಾಟೀಲ್ ಹೆಸರಿನಲ್ಲಿರುತ್ತದೆ. | 1,25,000/– |
| 13. | ರೋಣದಲ್ಲಿರುವ ಸರ್ವೆ ನಂ.ಬಿ51, ಬಿ52 ಬಿ53 ಫ್ಲಾಟ್ ನಂ. 693 ಆರೋಪಿತರ ಮಾವ ಶ್ರೀ ಫಕೀರಗೌಡ ಬಿ.ಪಾಟೀಲ್ ಹೆಸರಿನಲ್ಲಿದ್ದು, ಆರೋಪಿತರ ಮಕ್ಕಳಾದ ಶ್ರೀ ಚೇತನ ಮತ್ತು ಆಕಾಸ ರವರ ಹೆಸರಿಗೆ ವರ್ಗಾವಣೆಯಾಗಿರುತ್ತದೆ. | 60,000/– |
| 14. | ಡಿ.ಬಿ.ಬಿ.ಎಲ್. ಗನ್ ಆಫ್ ಎವರೆಸ್ಟ್ ಕಂಪನಿಯಲ್ಲಿ ತೊಡಗಿಸಿರುವ ಹಣ ಆರೋಪಿತರ ಹೆಸರಿನಲ್ಲಿ | 17,347/– |
| 15. | ಬಜಾಜ್ ಪಲ್‌ಸರ್ ಮೋಟಾರ್ ಸೈಕಲ್ ನಂ.ಕೆಎ 25/ಯು 618 ಆರೋಪಿತರ ಮಗ ಶ್ರೀ ರವಿರಾಜ ಹೆಚ್. ನಾಗರಾಳ ರವರ ಹೆಸರಿನಲ್ಲಿರುತ್ತದೆ. | 51,155/– |
| 16. | ಯಮಹಾ ಮೋಟಾರ್ ಸೈಕಲ್ ನಂ. ಕೆಎ 25/ಉ 618 ಆರೋಪಿತರ ಮಗ ಶ್ರೀ ಶಿವರಾಜ ಹೆಚ್ ನಾಗರಾಳ ರವರ ಹೆಸರಿನಲ್ಲಿರುತ್ತದೆ. | 49,500/– |
| 17. | ಮಹೀಂದ್ರಾ ಸ್ಕಾರ್ಪಿಯೋ ನಂ. ಕೆಎ 25/ಎನ್ 2166 ಆರೋಪಿತರ ಮಾವ ಶ್ರೀ ಫಕೀರಗೌಡ ಬಿ.ಪಾಟೀಲ್ ರವರ ಹೆಸರಿನಲ್ಲಿರುತ್ತದೆ. | 7,56,000/– |
| 18. | ರಾಜದೂತ್ ಮೋಟಾರ್ ಸೈಕಲ್ ನಂ. ಎಂವೈಆರ್–8948 | 1,500/– |
| 19. | ಗುರುಸಿದ್ದೇಶ್ವರ ಕೋ–ಆಪರೇಟಿವ್ ಬ್ಯಾಂಕ್, ಹುಬ್ಬಳ್ಳಿಯ ಉಳಿತಾಯ ಖಾತೆ ಸಂಖ್ಯೆ: 1606 ಆರೋಪಿತರ ಹೆಸರಿನಲ್ಲಿರುತ್ತದೆ. | 811/– |
| 20. | ಕೆ.ಜಿ.ಐ.ಡಿ. ಪಾಲಿಸಿ ಸಂಖ್ಯೆ: 1012369, 1185930, 1187057 ಆರೋಪಿತರ ಹೆಸರಿನಲ್ಲಿರುತ್ತದೆ. | 43,795/– |
| 21. | ಜಿಪಿಎಫ್ ಖಾತೆ ಸಂಖ್ಯೆ: ಎಲ್‌ಆರ್/6353 ಆರೋಪಿತರ ಹೆಸರಿನಲ್ಲಿರುತ್ತದೆ | 4,20,200/– |
| 22. | ಬ್ಯಾಂಕ್ ಆಫ್ ಇಂಡಿಯಾ ಉಳಿತಾಯ ಖಾತೆ ನಂ. 1934 ಆರೋಪಿತರ ಮಗ ಶ್ರೀ ಶಿವರಾಜ ಹೆಚ್. ನಾಗರಾಳರವರ ಹೆಸರಿನಲ್ಲಿರುತ್ತದೆ. | 357.74 |
| 23. | ಬ್ಯಾಂಕ್ ಆಫ್ ಇಂಡಿಯಾ ಉಳಿತಾಯ ಖಾತೆ ನಂ. 1933 ಆರೋಪಿತರ ಮಗ ಶ್ರೀ ರವಿರಾಜ ಹೆಚ್. ನಾಗರಾಳರವರ ಹೆಸರಿನಲ್ಲಿರುತ್ತದೆ. | 2,359.93 |
| 24. | ಸ್ಟೇಟ್ ಬ್ಯಾಂಕ್ ಅಫ್ ಇಂಡಿಯಾ, ಉಳಿತಾಯ ಖಾತೆ ಸಂಖ್ಯೆ: 10943198266 ಆರೋಪಿತರ ಮಗನ ಹೆಸರಿನಲ್ಲಿರುತ್ತದೆ. | 23,466.83 |
| 25. | ಹೀರೇಮಣ್ಣೂರು ವೈಶ್ಯ ಸೇವಾ ಸಹಕಾರಿ ಬ್ಯಾಂಕ್‌ನಲ್ಲಿರುವ | |
| | 1) ಖಾತೆ ಸಂಖ್ಯೆ: 6/119 ಆರೋಪಿತರ ಹೆಂಡತಿ ಶ್ರೀಮತಿ ಚೆನ್ನಮ್ಮ ಹೆಚ್.ನಾಗರಾಳ ರವರ ಹೆಸರಿನಲ್ಲಿರುತ್ತದೆ. | 250/– |
| | 2) ಖಾತೆ ಸಂಖ್ಯೆ: 6/121 ಆರೋಪಿತರ ಮಗ ಶ್ರೀ ಶಿವರಾಜ ಹೆಚ್. ನಾಗರಾಳ ರವರ ಹೆಸರಿನಲ್ಲಿರುತ್ತದೆ. | 250/– |
| | 3) ಖಾತೆ ಸಂಖ್ಯೆ: 6/126 ಆರೋಪಿತರ ಮಗ ಶ್ರೀ ರವಿರಾಜ ಹೆಚ್. ನಾಗರಾಳ ರವರ ಹೆಸರಿನಲ್ಲಿರುತ್ತದೆ. | 250/– |
| | 4) ಖಾತೆ ಸಂಖ್ಯೆ: 6/120 ಆರೋಪಿತರ ಮಗ ಕು: ಚೇತನ ಹೆಚ್. ನಾಗರಾಳ ರವರ ಹೆಸರಿನಲ್ಲಿರುತ್ತದೆ. | 250/– |
| | 5) ಖಾತೆ ಸಂಖ್ಯೆ: 6/127 ಆರೋಪಿತರ ಮಗ ಕು: ಚೇತನ ಹೆಚ್. ನಾಗರಾಳ ರವರ ಹೆಸರಿನಲ್ಲಿರುತ್ತದೆ. | 250/– |

**ಎಸ್.ಬಿ. ಸಸಾಲಟ್ಟಿ**

ಪಿ.ಆರ್. 414 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ)

**ವಿಷಯ:** ಸರ್ಕಾರದ ಸ್ವಾಯತ್ತ ಸಂಸ್ಥೆಗಳಿಗೆ ಒತ್ತುವರಿಯಿಂದ ತೆರವುಗೊಳಿಸಿದ ಸರ್ಕಾರಿ ಜಮೀನುಗಳನ್ನು ಬಿಬಿಎಂಪಿಗೆ ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶ ಸಂ. ಆರ್ ಡಿ 265 ಎಲ್.ಜಿ.ಬಿ. 2007 (ಭಾ–6), ದಿನಾಂಕ: 18.10.2007.
2. ಸರ್ಕಾರದ ಆದೇಶ ಸಂ. ಆರ್ ಡಿ 265 ಎಲ್.ಜಿ.ಬಿ. 2007 (ಭಾ–6), ದಿನಾಂಕ: 6.12.2008.
3. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ ವಿಜಿ(ಜಾದ)(ಉದ)ಸಿಆರ್/148/08–09, ದಿನಾಂಕ: 22.12.2008.
4. ಆಯುಕ್ತರು, ಬಿಬಿಎಂಪಿ, ಇವರ ಪತ್ರ ಸಂಖ್ಯೆ ಆ/ಪಿಎಸ್ಆರ್/429/08–09, ದಿನಾಂಕ: 22/01/2009.

**ಪ್ರಸ್ತಾವನೆ:**

ಉಲ್ಲೇಖ (1) ರಲ್ಲಿನ ಸರ್ಕಾರದ ಆದೇಶ ದಿನಾಂಕ: 18/10/2007ರಲ್ಲಿ ಒತ್ತುವರಿಯಿಂದ ಮುಕ್ತಗೊಳಿಸಿದ 3313.26 ಎಕರೆ ಜಮೀನನ್ನು ಸಾರ್ವಜನಿಕ ಉಪಯೋಗಕ್ಕಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮ 1969ರ ನಿಯಮ 20(1)(ಸಿ)ರಂತೆ ವಿವಿಧ ಸರ್ಕಾರದ ಸ್ವಾಯತ್ತ ಸಂಸ್ಥೆಗಳಿಗೆ ಮಂಜೂರು ಮಾಡಿ ಆದೇಶ ನೀಡಲಾಗಿತ್ತು.

ಇದರಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಘನ ತ್ಯಾಜ್ಯ ವಸ್ತು ವಿಲೇವಾರಿಗೆ ಮಾರ್ಗಸೂಚಿ ದರ ಶೇ.50ರಷ್ಟು ದರ ವಿಧಿಸಿ 744 ಎಕರೆ ಜಮೀನನ್ನು ಮಂಜೂರು ಮಾಡಲಾಗಿತ್ತು.

ಉಲ್ಲೇಖ (2)ರ ಆದೇಶದಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಮಂಜೂರಾಗಿದ್ದ 744 ಎಕರೆ ಜಮೀನನ್ನು 400 ಎಕರೆಗೆ ಸೀಮಿತಗೊಳಿಸಿ ಉಚಿತವಾಗಿ ಮಂಜೂರು ಮಾಡಲು ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದೆ ಹಾಗೂ ಗ್ರಾಮವಾರು ಸರ್ವೆನಂಬರ್‌ವಾರು ವಿವರಗಳ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸುವುದಾಗಿ ತಿಳಿಸಲಾಗಿದೆ.

ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಘನತ್ಯಾಜ್ಯ ವಸ್ತುಗಳ ವಿಲೇವಾರಿಗೆ ಸೂಕ್ತವಾದ ಜಮೀನಿನ ಬಗ್ಗೆ ಬಿಬಿಎಂಪಿಯೊಂದಿಗೆ ಹಾಗೂ ಸಂಬಂಧಪಟ್ಟ ತಹಶೀಲ್ದಾರರೊಂದಿಗೆ ಚರ್ಚಿಸಿ ಈ ಕೆಳಕಂಡ ಸರ್ವೆನಂಬರ್‌ಗಳ ಜಮೀನು ಘನತ್ಯಾಜ್ಯ ವಸ್ತು ವಿಲೇವಾರಿಗೆ ಸೂಕ್ತವಾಗಿದ್ದು, ಇವುಗಳನ್ನು ಬಿಬಿಎಂಪಿಗೆ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಸ.ನಂ. | ವಿಸ್ತೀರ್ಣ |
|---|---|---|---|---|---|
| 1 | ಬೆಂಗಳೂರು ಉತ್ತರ (ಅಪರ) | ಹೆಸರಘಟ್ಟ | ಗುಡ್ಡದಹಳ್ಳಿ | 43 | 46–31 |
| 2 | ಬೆಂಗಳೂರು ಉತ್ತರ | ಯಶವಂತಪುರ | ಮಲ್ಲಸಂದ್ರ | 33 | 33–00 |
| 3 | ಆನೇಕಲ್ | ಕಸಬಾ | ತಮ್ಮನಾಯಕನಹಳ್ಳಿ | 23 | 207–24 |
| 4 | ಆನೇಕಲ್ | ಕಸಬಾ | ಬಗ್ಗನದೊಡ್ಡಿ | 96 | 96–00 |
| 5 | ಬೆಂಗಳೂರು ಪೂರ್ವ | ಬಿದರಹಳ್ಳಿ | ಕಣ್ಣೂರು | 50 | 20–00 |
| | | | | **ಒಟ್ಟು** | **403–15** |

ಉಲ್ಲೇಖ (4)ರ ಆಯುಕ್ತರು, ಬಿಬಿಎಂಪಿ, ತಮ್ಮ ಪತ್ರದಲ್ಲಿ ಸದರಿ ಜಮೀನುಗಳನ್ನು ಆಯಾ ವಲಯದ ಪಾಲಿಕೆಯ ಪರಿಸರ ಅಭಿಯಂತರರು ವೀಕ್ಷಿಸಿ, ಕ್ರಮ ಸಂಖ್ಯೆ 2ರಲ್ಲಿನ ಜಮೀನು ಘನತ್ಯಾಜ್ಯ ವಿಲೇಗಾಗಿ ಸೂಕ್ತವಾಗಿರುವುದಿಲ್ಲ. ಆದ್ದರಿಂದ, ಇದನ್ನು ಹೊರತುಪಡಿಸಿ, ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿರುವ ಉಳಿದ 370–15 ಎ/ಗು ಜಮೀನನ್ನು ಮಾತ್ರ ಬಿಬಿಎಂಪಿಗೆ ಗುರುತಿಸಿ ಮಂಜೂರು ಮಾಡಲು ಕೋರಿರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ.ಕಂಇ 265 ಎಲ್.ಜಿ.ಬಿ 2007(ಪಿ6), ಬೆಂಗಳೂರು, ದಿನಾಂಕ: 27ನೇ ಜನವರಿ 2009**

ಸಮಸಂಖ್ಯೆಯ ದಿನಾಂಕ: 6/12/2008ರ ಆದೇಶವನ್ನು ಮುಂದುವರೆಸುತ್ತಾ, ಬಿಬಿಎಂಪಿಗೆ ಘನತ್ಯಾಜ್ಯ ವಸ್ತು ವಿಲೇವಾರಿಗಾಗಿ ಮಂಜೂರಾಗಿರುವ ಜಮೀನುಗಳ ಗ್ರಾಮ ಹಾಗೂ ಸರ್ವೆನಂಬರ್‌ಗಳ ವಿವರಗಳನ್ನು ಈ ಕೆಳಕಂಡಂತೆ ಗುರುತಿಸಿ ಆದೇಶ ಹೊರಡಿಸಲಾಗಿದೆ.

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಸ.ನಂ. | ವಿಸ್ತೀರ್ಣ |
|---|---|---|---|---|---|
| 1 | ಬೆಂಗಳೂರು ಉತ್ತರ (ಅಪರ) | ಹೆಸರಘಟ್ಟ | ಗುಡ್ಡದಹಳ್ಳಿ | 43 | 46–31 |
| 2 | ಆನೇಕಲ್ | ಕಸಬಾ | ತಮ್ಮನಾಯಕನಹಳ್ಳಿ | 23 | 207–24 |
| 3 | ಆನೇಕಲ್ | ಕಸಬಾ | ಬಗ್ಗನದೊಡ್ಡಿ | 96 | 96–00 |
| 4 | ಬೆಂಗಳೂರು ಪೂರ್ವ | ಬಿದರಹಳ್ಳಿ | ಕಣ್ಣೂರು | 50 | 20–00 |
| | | | | **ಒಟ್ಟು** | **370–15** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಈಶ್ವರ್ ನಾಯಕ್**

ಪಿ.ಆರ್. 416 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ:ಫಯಾಜ್ ಅಹಮ್ಮದ್ ಷರೀಫ್, ಸಹಾಯಕ ಪ್ರಾಧ್ಯಾಪಕರು (ಯು), ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ರವರನ್ನು ರಾಷ್ಟ್ರೀಯ ಯುನಾನಿ ವೈದ್ಯಕೀಯ ಸಂಸ್ಥೆ, ಬೆಂಗಳೂರು ಇಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಆಯುಷ್/21/ಸಿಬ್ಬಂದಿ(1)/2008-09, ದಿನಾಂಕ: 06.12.2008.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರದಲ್ಲಿ, ಡಾ:ಫಯಾಜ್ ಅಹಮ್ಮದ್ ಷರೀಫ್, ಸಹಾಯಕ ಪ್ರಾಧ್ಯಾಪಕರು (ಯು), ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇವರನ್ನು ಯುನಾನಿ ಪದ್ಧತಿಯಲ್ಲಿ ಬೆಂಗಳೂರಿನ ರಾಷ್ಟ್ರೀಯ ಯುನಾನಿ ವೈದ್ಯಕೀಯ ಸಂಸ್ಥೆಯಲ್ಲಿ 2008-09ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಸ್ನಾತಕೋತ್ತರ ವ್ಯಾಸಂಗ ಮಾಡಲು ಆಯ್ಕೆ ಮಾಡಿದ್ದು, ಪ್ರವೇಶ ಪಡೆದಿದ್ದಾರೆಂದು ತಿಳಿಸಿದ್ದಾರೆ. ಹಾಗೂ ಸದರಿ ಸಹಾಯಕ ಪ್ರಾಧ್ಯಾಪಕರು ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ 2 (ಎ) (1) ರನ್ವಯ ನಿಗದಿಪಡಿಸಿದ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸಿರುತ್ತಾರೆಂದು ತಿಳಿಸಿ, ಮೂರು ವರ್ಷಗಳ ಅವಧಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 396 ಪಿಟಿಡಿ 2008, ಬೆಂಗಳೂರು, ದಿನಾಂಕ: 22ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಡಾ:ಫಯಾಜ್ ಅಹಮ್ಮದ್ ಷರೀಫ್, ಸಹಾಯಕ ಪ್ರಾಧ್ಯಾಪಕರು (ಯು), ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇವರನ್ನು (2008-09ನೇ ಸಾಲಿನ ಸ್ನಾತಕೋತ್ತರ ಪದವಿ ವ್ಯಾಸಂಗಕ್ಕಾಗಿ) ಬೆಂಗಳೂರಿನ ರಾಷ್ಟ್ರೀಯ ಯುನಾನಿ ವೈದ್ಯಕೀಯ ಸಂಸ್ಥೆಯಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ 2 (ಎ)(1) ರ ನಿಯಮದನ್ವಯ ಈ ಕೆಳಗಿನ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸುವ ಷರತ್ತಿಗೊಳಪಟ್ಟು ಮೂರು ವರ್ಷಗಳ ಅವಧಿಗೆ ನಿಯೋಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

1) ಅವರು ಹುದ್ದೆಯ ಮೇಲಿನ ಹಕ್ಕನ್ನು ಮುಂದುವರೆಸುವುದು.
2) ಅವರು ವಿದ್ಯಾಭ್ಯಾಸದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 8(15)(ಸಿ) ಪ್ರಕಾರ ಕೆಲಸದ ಮೇಲಿದ್ದಾರೆಂದು ಪರಿಗಣಿಸುವುದು.
3) ಈ ಅವಧಿಯಲ್ಲಿ ಅವರು ಪಡೆಯುತ್ತಿರುವ ವೇತನ ಮತ್ತು ಇತರೆ ಭತ್ಯೆಗಳನ್ನು ಯಥಾವತ್ತಾಗಿ ಮುಂದುವರೆಸುವುದು.
4) ಸ್ನಾತಕೋತ್ತರ ಪದವಿ ಕೋರ್ಸಿಗೆ ಪ್ರವೇಶದ ಮುನ್ನ ಅವರ ಕೆ.ಸಿ.ಎಸ್.ಆರ್. ನಿಯಮಾವಳಿಗಳ ನಮೂನೆ-19ರಲ್ಲಿ ಸ್ಟಾಂಪ್ ಪೇಪರ್‌ನಲ್ಲಿ ಒಪ್ಪಿಗೆ ಪ್ರಮಾಣ ಪತ್ರ ನೀಡುವುದು.
5) ವ್ಯಾಸಂಗದ ಸ್ಥಳದಲ್ಲಿ ದಿನಭತ್ಯೆಯ ಒಂದರ ಅರ್ಧದಷ್ಟು ಸಮನಾದ ಶಿಷ್ಯ ವೇತನ ನೀಡುವುದು.
6) ವ್ಯಾಸಂಗಕ್ಕೆ ಸೇರಲು ಕೇಂದ್ರ ಸ್ಥಾನದಿಂದ ವ್ಯಾಸಂಗದ ಸ್ಥಳಕ್ಕೆ ಮೊದಲ ಬಾರಿಗೆ ಹೋಗಲು ಮತ್ತು ವ್ಯಾಸಂಗದ ಅವಧಿ ಮುಗಿದ ನಂತರ ವಾಪಸ್ಸು ಬರಲು ಪ್ರವಾಸದ ಮೇಲಿದ್ದಂತೆ ಪ್ರಯಾಣ ಭತ್ಯೆ ನೀಡುವುದು.
7) ಉನ್ನತ ಶಿಕ್ಷಣಕ್ಕೆ ನಿಯೋಜಿಸಲ್ಪಟ್ಟ ವೈದ್ಯರು ಕೆ.ಸಿ.ಎಸ್.ಆರ್. ನಿಯಮಾವಳಿಗಳಲ್ಲಿ ಉನ್ನತ ವ್ಯಾಸಂಗಕ್ಕೆ ಲಭ್ಯವಿರುವ ಸವಲತ್ತುಗಳನ್ನು ಮಾತ್ರ ಪಡೆಯತಕ್ಕದ್ದು.
8) ಈ ನಿಯೋಜನೆಯು ಸದರಿ ವೈದ್ಯರಿಗೆ ಪ್ರಥಮ ನಿಯೋಜನೆ ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮಗಳಿಗೆ ಸಡಿಲಿಕೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 417

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** 2008-09ನೇ ಸಾಲಿಗೆ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಲೆಕ್ಕಶೀರ್ಷಿಕೆ 3451-00-090-2-21 [ಯೋಜನೇತರ] – ಉಪಶೀರ್ಷಿಕೆಯಡಿಯಲ್ಲಿ ರೂ. 6.00 ಲಕ್ಷಗಳ ಪುನರ್‌ವಿನಿಯೋಗ ಕುರಿತಂತೆ ಆದೇಶ.

**ಓದಲಾಗಿದೆ:** ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ ಮಾತಂಜೈತಂನಿ/ಲೆಕ್ಕ-1/ಯುಎನ್ಐ/10/624/ 2006-07, ದಿನಾಂಕ: 1.12.2008.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ದಿನಾಂಕ: 1.12.2008ರ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ನಿರ್ದೇಶಕರ ಪತ್ರದಲ್ಲಿ ನಿರ್ದೇಶಕರು 2008-09ನೇ ಸಾಲಿನ ನಿರ್ದೇಶನಾಲಯದ ಲೆಕ್ಕಶೀರ್ಷಿಕೆ "3451-00-090-2-21 [ಯೋಜನೇತರ]" ಕರ್ನಾಟಕ ಸರ್ಕಾರಿ ಗಣಕ ಕೇಂದ್ರದ ಉಪಶೀರ್ಷಿಕೆ 071 ಕಟ್ಟಡಗಳ ಖರ್ಚುಗಳ ಅಡಿಯಲ್ಲಿ ಬಾಡಿಗೆ, ನೀರಿನ ವೆಚ್ಚ ಮತ್ತು ಇತರ ವೆಚ್ಚಗಳಿಗಾಗಿ ರೂ. 3.00 ಲಕ್ಷ ಅನುದಾನವನ್ನು ಒದಗಿಸಿದ್ದು, ಈವರೆಗೆ ರೂ. 2.79 ಲಕ್ಷ ಖರ್ಚಾಗಿದ್ದು, ಒಟ್ಟಾರೆ ರೂ. 12,44,218.00ಗಳ ಅವಶ್ಯಕತೆ ಇರುವುದರಿಂದ, ಈ ಲೆಕ್ಕಶೀರ್ಷಿಕೆಯಡಿಯಲ್ಲಿ ಇನ್ನೂ ರೂ. 12,23,211.00 ಗಳ ಕೊರತೆಯಿರುವುದರಿಂದ, ಈ ಶೀರ್ಷಿಕೆಯಡಿ ರೂ. 12.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲು ಕೋರಿರುತ್ತಾರೆ.

ಮುಂದುವರೆದು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಉಪಶೀರ್ಷಿಕೆಗಳಾದ "3451-00-090-2-21 [ಯೋಜನೇತರ] 051 ಇತರೆ ಖರ್ಚುಗಳು [General Expenses] ರೂ. 1.77 ಲಕ್ಷಗಳ ಅನುದಾನ ಒದಗಿಸಿದ್ದು, ಇದರಡಿಯಲ್ಲಿ ರೂ. 1.00 ಲಕ್ಷ ಉಳಿತಾಯ, 052- ದೂರವಾಣಿ ಖರ್ಚುಗಳ ಅಡಿಯಲ್ಲಿ ರೂ. 2.57 ಲಕ್ಷ ಅನುದಾನದಲ್ಲಿ ರೂ. 1.50 ಲಕ್ಷ ಉಳಿತಾಯ, 200-ನಿರ್ವಹಣೆ ಶೀರ್ಷಿಕೆಯಡಿಯಲ್ಲಿ ರೂ. 3.43 ಲಕ್ಷ ಅನುದಾನದಲ್ಲಿ ರೂ. 2.00 ಲಕ್ಷ ಉಳಿತಾಯ ಹಾಗೂ 221-ಸಾಮಗ್ರಿ ಮತ್ತು ಸರಬರಾಜು ಅಡಿಯಲ್ಲಿ ರೂ. 2.86 ಲಕ್ಷ ಅನುದಾನದಲ್ಲಿ ರೂ. 1.50 ಲಕ್ಷ ಉಳಿತಾಯ ಹೀಗೆ ಒಟ್ಟು ಉಳಿಯಬಹುದಾದ ರೂ. 6.00 ಲಕ್ಷಗಳನ್ನು 071 – ಕಟ್ಟಡ ವೆಚ್ಚಗಳಿಗೆ ಪುನರ್ವಿನಿಯೋಗ ಮಾಡಿಕೊಳ್ಳಬಹುದಾಗಿದೆ ಎಂದು ತಿಳಿಸಿ ಪುನರ್ ವಿನಿಯೋಗವನ್ನು ನಿಗದಿತ ನಮೂನೆಯಲ್ಲಿ ಸಲ್ಲಿಸುತ್ತಾ, ಸದರಿ ಪ್ರಸ್ತಾವನೆಯನ್ನು ಅಂಗೀಕರಿಸಿ ಸೂಕ್ತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 113 ಅಡವಿ 2008, ಬೆಂಗಳೂರು, ದಿನಾಂಕ: 22ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಲೆಕ್ಕಶೀರ್ಷಿಕೆ "3451-00-090-2-21 [ಯೋಜನೇತರ] ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ" ಇದರಡಿಯಲ್ಲಿನ ಉಪಶೀರ್ಷಿಕೆಗಳಾದ 051 ಇತರೆ ಖರ್ಚುಗಳು [General Expenses] ಇದರಡಿಯಲ್ಲಿ ರೂ. 1.00 ಲಕ್ಷ, 052- ದೂರವಾಣಿ ಖರ್ಚುಗಳ ಅಡಿಯಲ್ಲಿ ರೂ. 1.50 ಲಕ್ಷ, 200-ನಿರ್ವಹಣೆ ಶೀರ್ಷಿಕೆಯಡಿಯಲ್ಲಿ ರೂ. 2.00 ಲಕ್ಷ ಹಾಗೂ 221-ಸಾಮಗ್ರಿ ಮತ್ತು ಸರಬರಾಜು ಅಡಿಯಲ್ಲಿ ರೂ. 1.50 ಲಕ್ಷಗಳಂತೆ ಒಟ್ಟು ರೂ. 6.00 ಲಕ್ಷಗಳ ಉಳಿತಾಯವನ್ನು ಅದೇ ಲೆಕ್ಕಶೀರ್ಷಿಕೆಯಲ್ಲಿನ ಉಪಶೀರ್ಷಿಕೆ 071- ಕಟ್ಟಡಗಳ ಖರ್ಚುಗಳಿಗೆ ಪುನರ್ವಿನಿಯೋಗ ಮಾಡಿಕೊಳ್ಳಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 11 ಟಿಎಫ್‌ಪಿ 2007, ದಿನಾಂಕ: 27.11.2007ರ ಮೇರೆಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 422

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ವಿಷಯ:** ಬೆಳಗಾವಿ ನಗರದ ಹಿಂಡಲಗಾ ಗ್ರಾಮದ ರಿ.ಸ.ನಂ. 189/ಎ/1ರಲ್ಲಿ 5 ಎಕರೆ 17 ಗುಂಟೆ 3.26 ಅಣಿ ಜಮೀನನ್ನು ಕಿಯೋನಿಕ್ಸ್ ಮತ್ತು ಎಸ್.ಟಿ.ಪಿ.ಐ. ಸಂಸ್ಥೆಗಳಿಗೆ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ರವರ ಪತ್ರ ಸಂ:ಮಾತಂ&ಜೈತಂನಿ/ಎಸ್.ಎ./ಬೆಳಗಾವಿ/06/717/2008-09, ದಿನಾಂಕ: 9.1.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 9.1.2009ರ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶಕರ ಪತ್ರದಲ್ಲಿ ಬೆಳಗಾವಿ ಜಿಲ್ಲೆಯ ಹಿಂಡಲಗಾ ಗ್ರಾಮದ ರಿ.ಸ.ನಂ. 189/ಎ/1ರಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯಕ್ಕೆ ಮಾಹಿತಿ ತಂತ್ರಜ್ಞಾನ ಪಾರ್ಕ್‌ನ್ನು ಸ್ಥಾಪಿಸುವ ಸಲುವಾಗಿ 5 ಎಕರೆ 17 ಗುಂಟೆ 3.26 ಅಣಿ ಆಕಾರದ ಜಮೀನನ್ನು ಜಿಲ್ಲಾಧಿಕಾರಿಗಳು, ಬೆಳಗಾವಿ ಇವರು ಮಂಜೂರು ಮಾಡಿದ್ದು, ಸದರಿ ಜಮೀನು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶಕರ ಹೆಸರಿನಲ್ಲಿ ನೋಂದಾವಣಿಯಾಗಿದ್ದು, ಸದರಿ ಜಮೀನಿನಲ್ಲಿ 1 ಎಕರೆ ಜಮೀನನ್ನು

ಎಸ್.ಟಿ.ಪಿ.ಐ.ಗೆ 60 ಸೀಟಿನ ನೆಟ್‌ವರ್ಕ್ ಆಪರೇಷನ್ ಸೆಂಟರ್ ಸ್ಥಾಪಿಸಲು ಮತ್ತು ಉಳಿದ 4 ಎಕರೆ 17 ಗುಂಟೆ 3.26 ಅಣಿ ಆಕಾರದ ಜಮೀನಿನಲ್ಲಿ ಐಟಿ ಪಾರ್ಕ್ ನಿರ್ಮಾಣ ಮಾಡಲು ಕಿಯೋನಿಕ್ಸ್ ಸಂಸ್ಥೆಗೆ ನೀಡಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 1 ಅಚವಿ 2009, ಬೆಂಗಳೂರು, ದಿನಾಂಕ: 20ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆಯ ಹಿಂಡಲಗಾ ಗ್ರಾಮದ ರಿ.ಸ.ನಂ. 189/ಎ/1ರಲ್ಲಿ ನಿರ್ದೇಶನಾಲಯದ ಒಡೆತನದಲ್ಲಿರುವ 5 ಎಕರೆ 17 ಗುಂಟೆ 3.26 ಅಣಿ ಆಕಾರದ ಜಮೀನಿನಲ್ಲಿ 1 ಎಕರೆ ಜಮೀನನ್ನು ಎಸ್.ಟಿ.ಪಿ.ಐ.ಗೆ ಭೂಕೇಂದ್ರ ನಿರ್ಮಾಣ ಮಾಡಲು ಹಾಗೂ ಉಳಿದ 4 ಎಕರೆ 17 ಗುಂಟೆ 3.26 ಅಣಿ ಜಮೀನನ್ನು ಐಟಿ ಪಾರ್ಕ್ ಸ್ಥಾಪಿಸಲು ಕಿಯೋನಿಕ್ಸ್ ಸಂಸ್ಥೆಗೆ ನೀಡಲು ಸರ್ಕಾರದ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 423 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ವಿಷಯ:** 2008–09ನೇ ಸಾಲಿನ ಹೊಸ ಆಯವ್ಯಯದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೆಂದ್ರಕ್ಕೆ ನೀಡಲಾದ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 11 ಅಚವಿ 2008, ದಿ: 15.5.08.
2. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 11 ಅಚವಿ 2008, ದಿ: 26.7.08.
3. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 11 ಅಚವಿ 2008, ದಿ: 14.10.08.
4. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 11 ಅಚವಿ 2008, ದಿ: 20.12.08.
5. ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರರವರ ಪತ್ರ ಸಂ: ಕರಾದೂಸಂಅಕೇಂ/211/2008, ದಿನಾಂಕ: 18.12.2008.

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಲೆಕ್ಕಶೀರ್ಷಿಕೆ **"3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ]"** ರಡಿಯಲ್ಲಿ ರೂ. 180.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದ್ದು, ನಂತರ ರೂ. 500.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಅಂದರೆ ಒಟ್ಟು ರೂ. 680.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಒದಗಣೆ ಮಾಡಲಾದ ರೂ. 680.00 ಲಕ್ಷಗಳಲ್ಲಿ ಈಗಾಗಲೇ ಮೇಲೆ [1], [2], [3] ಮತ್ತು [4]ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಅನುಕ್ರಮವಾಗಿ ರೂ. 45.00 ಲಕ್ಷಗಳಂತೆ ಅಂದರೆ ಒಟ್ಟು ರೂ. 180.00 ಲಕ್ಷ ಬಿಡುಗಡೆ ಮಾಡಲಾಗಿದೆ.

ಮೇಲೆ [5] ರಲ್ಲಿ ಓದಲಾದ ನಿರ್ದೇಶಕರ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರ ಪತ್ರದಲ್ಲಿ ಗುಲ್ಬರ್ಗಾ, ಬಿಜಾಪುರ, ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಹಾಗೂ ಹುಬ್ಬಳ್ಳಿ ಧಾರವಾಡ, ದಾವಣಗೆರೆ, ಹರಿಹರ, ಬೆಳಗಾವಿ, ಮಂಗಳೂರು, ಗುಲ್ಬರ್ಗ, ಶಿವಮೊಗ್ಗ ರಾಯಚೂರು, ಮಡಿಕೇರಿ, ಚಿಕ್ಕಮಗಳೂರು ಮತ್ತು ಉಡುಪಿ ಒಟ್ಟು 12 ತಾಲ್ಲೂಕುಗಳಲ್ಲಿ National Remote Sensing Centre, ISRO, Department of Space, Govt. of India, Hyderabad ಇವರ ಮೂಲಕ ಕ್ವಿಕ್‌ಬರ್ಡ್ ಉಪಗ್ರಹದ ಮಾಹಿತಿ ಪಡೆಯಲು [procurement of Quick bird Satellite data] ರೂ. 500.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈಗ ರೂ. 250.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 51 ಅಡವಿ 2008 ಬೆಂಗಳೂರು, ದಿನಾಂಕ: 21ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಗುಲ್ಬರ್ಗಾ, ಬಿಜಾಪುರ, ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಹಾಗೂ ಹುಬ್ಬಳ್ಳಿ ಧಾರವಾಡ, ದಾವಣಗೆರೆ, ಹರಿಹರ, ಬೆಳಗಾವಿ, ಮಂಗಳೂರು, ಗುಲ್ಬರ್ಗ, ಶಿವಮೊಗ್ಗ ರಾಯಚೂರು, ಮಡಿಕೇರಿ, ಚಿಕ್ಕಮಗಳೂರು ಮತ್ತು ಉಡುಪಿ ಒಟ್ಟು 12 ತಾಲ್ಲೂಕುಗಳಲ್ಲಿ National Remote Sensing Centre, ISRO, Department of Space, Govt.of India, Hyderabad ಇವರ ಮೂಲಕ ಕ್ವಿಕ್‌ಬರ್ಡ್ ಉಪಗ್ರಹದ ಮಾಹಿತಿ ಪಡೆಯಲು [procurement of Quickbird Satellite data] ರೂ. 250.00 ಲಕ್ಷಗಳ [ಇನ್ನೂರೈವತ್ತು ಲಕ್ಷ

ರೂಪಾಯಿಗಳು ಮಾತ್ರ] ಅನುದಾನವನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ– 059 ಇತರೆ ಖರ್ಚು [ಯೋಜನೆ]"** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: ಎಫ್‌ಡಿ 559 ವೆಚ್ಚ–2/2008, ದಿನಾಂಕ: 16.01.2009ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 424 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## INFRASTRUCTURE DEVELOPMENT SECRETARIAT

**Sub:** Release of funds towards cost sharing Railway project Kotturu-Harihar new broad gauge railway line project.

**Read:**
1. G.O.No. IDD 1 NSW 2002 dated. 22.03.02.
2. G.O.No. IDD 47 NSW 2003 (P) dated. 26.03.2004.
3. G.O.No. IDD 51 NSW 2004 dated. 19.07.2004.
4. G.O.No. IDD 98 NSW 2003 dated. 21.10.2006.
5. G.O.No. IDD 98 NSW 2003 dated. 20.12.2006.
6. G.O.No. IDD 98 NSW 2003 dated. 5.09.2007.
7. G.O.No. IDD 15 NSW 2008 dated. 22.10.08.
8. Letter No. W.63/B/CN/BNC/ Genl dated 29.08.2008 of Chief Engineer, (Con.,) SWR, Bangalore.

**PREAMBLE**

In the Government Order's referred to at Sl. No. (1) to (7) above Government of Karnataka has so far released an amount of Rs.80.00 crore towards cost sharing for Kotturu-Harihar New railway line project.

2. The Chief Engineer, South Western Railway, Bangalore in his letter read at Sl.No. (8) above, has stated that the railways had already spent Rs.102.54 crore towards Kotturu-Harihar new railway line project and requested for immediate balance deposit of 2/3 share of Government of Karnataka which comes to Rs. 50.40 crore.

3. The proposal of Railways has been examined and it has been decided to release an amount of Rs.10.00 crore out of the Budget of Rs.100.00 crore provided under the Head of Account "5465-01-190-0-3-05" (Plan) 211 investment towards cost sharing for new railway projects during 2008-09. Hence this order.

**Government Order No. IDD 15 NSW 2008, Bangalore, Dated: 17th December 2008.**

After careful examination of the request of Railways, Government is pleased to release Rs.10.00 crore (Rupees Ten Crore only) towards Kotturu-Harihar new railway line being the part of the balance 2/3rd share of Government of Karnataka. The above amount shall be met under the Head of Account "5465-01-190-3-05" (Plan) 211 investment out of the budget provision Rs.100.00 crore towards cost sharing for new railway projects during 2008-09.

2. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government. Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

3. This order is issued in accordance with the concurrence of Finance Department given vide U.O.Note No.FD 1320 Exp-I/08 dated 13.10.2008.

By Order and in the name of Governor of Karnataka,

**N. MANJULA GEETHA**

P.R. 427

Under Secretary to Government,

Infrastructure Development Department.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು 1992 ರಿಂದ 2003 ರವರೆಗೆ ರೇಷ್ಮೆ ಇಲಾಖೆಗೆ ಪಾವತಿಸಬೇಕಾಗಿರುವ ಬಾಡಿಗೆ ಬಾಬ್ತು ರೂ. 13,23,677/–ಗಳನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಬೆರೆವಿಕೆ/ಲೆಕ್ಕ/ಬಾಡಿಗೆ/06/04–05, ದಿನಾಂಕ: 31.5.2008.

**ಪ್ರಸ್ತಾವನೆ:**

ಬೆಂಗಳೂರು ಕಬ್ಬನ್ ಪೇಟೆಯಲ್ಲಿರುವ ಹಮೀದ್ ಷಾ ಕಾಂಪ್ಲೆಕ್ಸ್‌ನ ಬಾಡಿಗೆ ಕಟ್ಟಡದಲ್ಲಿ ರೇಷ್ಮೆ ವಿನಿಮಯ ಕೇಂದ್ರವಿದ್ದು, ಸದರಿ ಕಟ್ಟಡದ ನೆಲಮಹಡಿಯಲ್ಲಿ 1904.98 ಚದರಡಿಗಳ ವಿಸ್ತೀರ್ಣದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಕಾರ್ಯನಿರ್ವಹಿಸುತ್ತಿದ್ದು ಇದರ ಡಿಸೆಂಬರ್–1992 ರಿಂದ ನವೆಂಬರ್ 2000 ವರೆಗಿನ ಬಾಡಿಗೆ ಬಾಬ್ತು ಮೊತ್ತ ರೂ. 13,23,667/– ಗಳನ್ನು ಮಂಡಳಿಯು ಪಾವತಿಸದೇ ಇರುವುದರಿಂದ ಲೆಕ್ಕ ಪರಿಶೋಧನಾ ವರದಿಯಲ್ಲಿ ಆಕ್ಷೇಪಣೆಯಾಗಿದ್ದು, ಕಂಡಿಕೆ ಇತ್ಯರ್ಥವಾಗದೇ ಬಾಕಿ ಇರುವುದಾಗಿ ತಿಳಿಸಿ ಈ ಬಾಕಿಯನ್ನು ಪಾವತಿಸುವಂತೆ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯನ್ನು ಕೋರಿದಾಗ ಸದರಿ ಮಂಡಳಿಯ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ನಷ್ಟದಲ್ಲಿ ನಡೆಯುತ್ತಿರುವುದರಿಂದ ಸರ್ಕಾರದಿಂದ ಷೇರು ಬಂಡವಾಳದ ಹೊರತಾಗಿ ಯಾವುದೇ ಸಹಾಯಧನ ದೊರೆಯದೇ ಇರುವುದರಿಂದ ನೌಕರರ ವೇತನ ಮತ್ತು ಮಂಡಳಿಯ ವೆಚ್ಚವನ್ನು ನಿಭಾಯಿಸುವುದು ಕಷ್ಟವಾಗಿರುವುದರಿಂದ ಮಂಡಳಿಯ ಪ್ರಸಕ್ತ ಹಣಕಾಸಿನ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಬಾಡಿಗೆ ಬಾಬ್ತನ್ನು ಮನ್ನಾ ಮಾಡುವಂತೆ ಕೋರಿರುವುದಾಗಿ ತಿಳಿಸಿ ಮಹಾಲೇಖಪಾಲರ ಆಕ್ಷೇಪಣಾ ಕಂಡಿಕೆಗಳಿಗೆ ಉತ್ತರಿಸಬೇಕಾಗಿರುವುದರಿಂದ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ಕೋರಿಕೆಯನ್ನು ಸರ್ಕಾರದ ಗಮನಕ್ಕೆ ತಂದು ಈ ಬಗ್ಗೆ ಸರ್ಕಾರದ ಸೂಕ್ತ ಆದೇಶವನ್ನು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿರುತ್ತಾರೆ.

ವಿಷಯದ ಕುರಿತಂತೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ನಾನಾ ಕಾರಣಗಳಿಂದ ನಷ್ಟದಲ್ಲಿದ್ದು ಅದು ತನ್ನ ದಿನನಿತ್ಯದ ಖರ್ಚುವೆಚ್ಚಗಳನ್ನು ನಿಭಾಯಿಸಲು ಕಷ್ಟಸಾಧ್ಯವಾಗಿರುವುದರಿಂದ ಮಂಡಳಿಯ ಪ್ರಸ್ತುತ ಹಣಕಾಸಿನ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಬಾಡಿಗೆ ಮನ್ನಾ ಮಾಡುವಂತೆ ಮಂಡಳಿಯು ಕೋರಿರುವುದನ್ನು ರೇಷ್ಮೆ ಆಯುಕ್ತರು ಸರ್ಕಾರದ ಗಮನಕ್ಕೆ ತಂದಿರುವ ಹಿನ್ನೆಲೆಯಲ್ಲಿ ಅದರಂತೆ ಬಾಡಿಗೆ ಮನ್ನಾ ಮಾಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 27 ರೇಯೋವಿ 2008, ಬೆಂಗಳೂರು, ದಿನಾಂಕ: 30ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯಿಂದ 1992 ರಿಂದ 2003 ರವರೆಗೆ ರೇಷ್ಮೆ ಇಲಾಖೆಗೆ ನೀಡಬೇಕಾಗಿದ್ದ ಹಮೀದ್ ಷಾ ಕಾಂಪ್ಲೆಕ್ಸ್‌ನ ಬಾಡಿಗೆ ಬಾಕಿ ಬಾಬ್ತು ಮೊತ್ತ ರೂ. 13.24 ಲಕ್ಷ (ಹದಿಮೂರು ಲಕ್ಷದ ಇಪ್ಪತ್ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಪಾವತಿಸುವುದನ್ನು ಮನ್ನಾ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1452 ವೆಚ್ಚ–1 2008, ದಿನಾಂಕ: 10.12.2008 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 429

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ – ಆದೇಶ.

**ಪ್ರಸ್ತಾವನೆ:**

ಕಳೆದ 10 ವರ್ಷಗಳ ಅವಧಿಯಲ್ಲಿ ಕರ್ನಾಟಕ ರಾಜ್ಯವು ಮಾಹಿತಿ ತಂತ್ರಜ್ಞಾನ / ಬಿ.ಪಿ.ಓ / ಐ.ಟಿ.ಇ.ಎಸ್ ವಲಯಗಳಲ್ಲಿ ಮಂಚೂಣಿಯಲ್ಲಿ ಹೊರಹೊಮ್ಮಿದೆ. ವಿಶ್ವದ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಬೆಂಗಳೂರು ಅಂಗೀಕೃತವಾಗಿ ಮುಂದಾಳುತನದಲ್ಲಿದೆ. ಈ ನಗರವು ಅತ್ಯಧಿಕ ಉದ್ಯೋಗ ಸೃಜನೆಯ ವಲಯಗಳಾದ ತನ್ನ ತಂತ್ರಾಂಶ ಸೇವೆ, ಆರ್ ಅಂಡ್ ಡಿ, ಬಿ.ಪಿ.ಓ ಹಾಗೂ ಐ.ಟಿ.ಇ.ಎಸ್ ಗೆ ಹೆಸರುವಾಸಿಯಾಗಿದೆ. ಬಿ.ಪಿ.ಓ / ಐ.ಟಿ.ಇಎಸ್ ವಲಯಗಳಲ್ಲಿಯೇ 2 ಲಕ್ಷಕ್ಕೂ ಹೆಚ್ಚಿನ ಮಂದಿಗೆ ನೇರ ಉದ್ಯೋಗ ಒದಗಿಸಲಾಗುತ್ತಿದೆ.

ಗ್ರಾಮೀಣ ಬಿ.ಪಿ.ಓ ಕೇಂದ್ರವು ಧ್ವನಿಯಾಧಾರಿತ, ಅಂಕಿ–ಅಂಶಗಳ ಮಾಹಿತಿ ಆಧಾರಿತ ಅಥವಾ ಎರಡರ ಒಂದು ಸಂಯೋಗವಾಗಿರುತ್ತದೆ ಹಾಗೂ ಕೇಂದ್ರವು ಗ್ರಾಹಕರ ಆಂತರಿಕ ಕ್ರಿಯೆಗಳು, ಆರ್ಥಿಕ ಮತ್ತು ಲೆಕ್ಕಪತ್ರ ಸೇವೆಗಳು, ಕಾಲ್ ಸೆಂಟರ್ / medical transcription, engineering and design data management, insurance and medical services, data management ಇತ್ಯಾದಿಗಳಲ್ಲಿ ನಿರತವಾಗಿರುತ್ತದೆ. ಇಂತಹ ಸೇವೆಗಳಿಗೆ ಸಾಧಾರಣವಾಗಿ ಉನ್ನತ ವೃತ್ತಿಪರ ಜ್ಞಾನವು ಬೇಕಾಗಿರುವುದಿಲ್ಲ. ಸಾಧಾರಣ ಶಿಕ್ಷಣವನ್ನು ಪಡೆದ ಮತ್ತು ಕಂಪ್ಯೂಟರ್ ಜ್ಞಾನವನ್ನು ಹೊಂದಿದ ವ್ಯಕ್ತಿಗಳು ಲಾಭದಾಯಕ ಉದ್ಯೋಗವನ್ನು ಅಂತಹ ಬಿ.ಪಿ.ಓ. ಕೇಂದ್ರಗಳಿಂದ ಪಡೆಯಬಹುದು. ತಾಂತ್ರಿಕ ನೈಪುಣ್ಯತೆ ಹಾಗೂ ಸಂಪರ್ಕ ನೈಪುಣ್ಯತೆ ಮತ್ತು ಕಂಪ್ಯೂಟರ್ ಜ್ಞಾನವು ಬಿ.ಪಿ.ಓ ವಲಯಗಳಲ್ಲಿನ ಉದ್ಯೋಗಕ್ಕೆ ಸಾಕಾಗುತ್ತದೆ.

ಗ್ರಾಮಾಂತರ ಪ್ರದೇಶಗಳಲ್ಲಿ ಮಾಹಿತಿ ತಂತ್ರಜ್ಞಾನ ಆಧಾರಿತ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡುವ ಉದ್ದೇಶದಿಂದ ಸರ್ಕಾರವು ಗ್ರಾಮೀಣ ಮಾಹಿತಿ ತಂತ್ರಜ್ಞಾನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಉದ್ದೇಶಿಸಿದ್ದು, ಪ್ರಾಥಮಿಕವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಬಿ.ಪಿ.ಓ ಸೇವೆಗಳನ್ನು ಸ್ಥಾಪಿಸುವ ಮತ್ತು ಉನ್ನತೀಕರಿಸುವ ಗುರಿಯನ್ನು ಹೊಂದಿದೆ. ಈ ಸಂಬಂಧ 2008–09ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಘೋಷಣೆಯನ್ನು ಮಾಡಲಾಗಿದೆ.

ಗ್ರಾಮೀಣ ಬಿ.ಪಿ.ಓ ಕೇಂದ್ರವು ಸಾಮಾನ್ಯ ಸೇವಾ ಕೇಂದ್ರಕ್ಕಿಂತ (ನೆಮ್ಮದಿ ಕೇಂದ್ರಗಳಂತಹ) ಭಿನ್ನವಾಗಿದೆ. ಸಾಮಾನ್ಯ ಸೇವಾ ಕೇಂದ್ರವು ಸರ್ಕಾರದಿಂದ ಪ್ರಜೆಯವರೆಗೆ Government to Citizen (G 2 C) ಸೇವೆಗಳಾದಂತಹ ಜಾತಿ ಹಾಗೂ ಆದಾಯ ಪ್ರಮಾಣ ಪತ್ರಗಳು, ಜನನ ಮತ್ತು ಮರಣ ಪ್ರಮಾಣ ಪತ್ರಗಳು, ಸಾರ್ವಜನಿಕ ಉಪಯುಕ್ತತೆ ಬಿಲ್ಲುಗಳ ಸಂಗ್ರಹ ಮುಂತಾದ ಸೇವೆಗಳನ್ನು ನೀಡುತ್ತಲಿವೆ. ಒಂದು ಬಿ.ಪಿ.ಓ. ಕೇಂದ್ರವು ಖಾಸಗಿ ವಲಯದ ಸಾಹಸೋದ್ಯಮ ವ್ಯಕ್ತಿಗಳಿಂದ ಸ್ಥಾಪಿಸಲ್ಪಡುವ ಒಂದು ಕಂದಾಯ ಆಧಾರಿತ ವ್ಯವಹಾರ ಮಾದರಿಯಾಗುತ್ತದೆ. ಸರ್ಕಾರದ ಪಾತ್ರವು ಒಂದು ಯೋಗವಾಹಕ ಮತ್ತು ಸೌಲಭ್ಯದಾರದನಾಗಿರುತ್ತದೆ. (Catalyst and facilitator). ಗ್ರಾಮೀಣ ಬಿ.ಪಿ.ಓ ಕೇಂದ್ರಗಳಲ್ಲಿ Government to Citizen (G 2 C) ಸೇವೆಗಳು ಲಭ್ಯವಿರುವುದಿಲ್ಲ, ಆದರೆ ಬಿ 2 ಬಿ (ವ್ಯವಹಾರದಿಂದ ವ್ಯವಹಾರ) (Business to Business) ಸೇವೆಗಳು ನೀಡಲ್ಪಡುತ್ತವೆ.

ಸರ್ಕಾರವು ಒಂದು ಲಕ್ಷಕ್ಕೂ ಕಡಿಮೆ ಜನಸಂಖ್ಯೆಯಿರುವ ತಾಲ್ಲೂಕು / ಹೋಬಳಿ ಕೇಂದ್ರಸ್ಥಳಗಳಲ್ಲಿ ಗ್ರಾಮೀಣ ಬಿ.ಪಿ.ಓ ಕೇಂದ್ರಗಳನ್ನು ಸ್ಥಾಪಿಸಲು ಪ್ರೋತ್ಸಾಹಿಸಲು ಉದ್ದೇಶಿಸಿದೆ. ಎಲ್ಲಾ ತಾಲ್ಲೂಕು / ಹೋಬಳಿ ಕೇಂದ್ರಸ್ಥಳಗಳಲ್ಲಿ ಅವಶ್ಯ ಮಾಹಿತಿ ತಂತ್ರಜ್ಞಾನ ಮೂಲಭೂತ ಸೌಕರ್ಯ, ಅದರಲ್ಲೂ ವಿಶೇಷವಾಗಿ ವಿಶಾಲ ಪಟ್ಟಿ ಜೋಡಣೆ (Broadband connectivity) ಲಭ್ಯವಿರುತ್ತದೆ. ಗ್ರಾಮೀಣ ಬಿ.ಪಿ.ಓ ಕೇಂದ್ರಗಳನ್ನು ಸ್ಥಾಪಿಸಲು ಪೋತ್ಸಾಹಿಸಲು ಸರ್ಕಾರದ ಆರ್ಥಿಕ ಬೆಂಬಲವು ಮೂಲಭೂತ ಬಂಡವಾಳ ಸಹಾಯಧನ ಹೂಡಿಕೆ (Capital Investment Subsidy), ಮಾನವ ಶಕ್ತಿ ತರಬೇತಿಗಾಗಿ ಆರ್ಥಿಕ ಬೆಂಬಲ, ಹಾಗೂ ಕಟ್ಟಡ ಬಾಡಿಗೆಗಳು ಮತ್ತು ಅಂತರ್ಜಾಲ ಜೋಡಣೆಯ ವೆಚ್ಚವನ್ನು ಭರಿಸಲು ಸಹಾಯಧನ ಇವುಗಳಿಗೆ ಮಾತ್ರ ಸೀಮಿತವಾಗಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಚವಿ 2008, ಬೆಂಗಳೂರು, ದಿನಾಂಕ: 19ನೇ ಜನವರಿ 2009**

ಪ್ರಸ್ತಾವನೆಯಲ್ಲಿ ಹೇಳಿದ ಸಂದರ್ಭದಲ್ಲಿ ಸರ್ಕಾರವು ಒಂದು ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ತಾಲ್ಲೂಕು / ಹೋಬಳಿ ಕೇಂದ್ರಸ್ಥಳಗಳಲ್ಲಿ ಗ್ರಾಮಾಂತರ ಬಿ.ಪಿ.ಓ ಕೇಂದ್ರಗಳನ್ನು ಸ್ಥಾಪಿಸಲು ಪ್ರೋತ್ಸಾಹವನ್ನು ಘೋಷಿಸುತ್ತದೆ. 100 (ನೂರು) ವ್ಯಕ್ತಿಗಳಿಗೆ ಕಡಿಮೆ ಇಲ್ಲದಂತೆ ನೇರ ಉದ್ಯೋಗವನ್ನು ನೀಡುವ ಗ್ರಾಮೀಣ ಬಿ.ಪಿ.ಓ ಕೇಂದ್ರವು ರಾಜ್ಯ ಸರ್ಕಾರದಿಂದ ಈ ಕೆಳಕಂಡ ಆರ್ಥಿಕ ಬೆಂಬಲಕ್ಕೆ ಅರ್ಹವಾಗಿರುತ್ತದೆ.

**ಅನಾವರ್ತ ಆರ್ಥಿಕ ಬೆಂಬಲ (Non-recurring Financial Support):**

1. ಪ್ರತಿ 100 ಆಸನದ ಬಿ.ಪಿ.ಓ ಘಟಕಗಳಿಗೆ ರೂ.20.00 ಲಕ್ಷದವರೆಗೆ ಬಂಡವಾಳ ಹೂಡಿಕೆ ಸಹಾಯಧನ.
2. ಮಾನವ ಶಕ್ತಿ ತರಬೇತಿಗಾಗಿ ಪ್ರತಿ ಉದ್ಯೋಗಿಗೆ ರೂ.10,000 ಆರ್ಥಿಕ ಬೆಂಬಲ

**ಆವರ್ತ ಆರ್ಥಿಕ ಬೆಂಬಲ (Recurring Financial Support):**

ಕಟ್ಟಡ ಬಾಡಿಗೆಗಳು ಮತ್ತು ಅಂತರ್ಜಾಲ ಜೋಡಣೆಯ ವೆಚ್ಚವನ್ನು ಭರಿಸಲು ಪ್ರತಿ ಉದ್ಯೋಗಿಗೆ ಸಹಾಯಧನವಾಗಿ ರೂ.5000/– ಆರ್ಥಿಕ ಬೆಂಬಲ.

ಗ್ರಾಮಿಣ ಬಿಪಿಓ ಕೇಂದ್ರಗಳಿಗೆ ಆರ್ಥಿಕ ಬೆಂಬಲವನ್ನು "ಲೆಕ್ಕಶೀರ್ಷಿಕೆ 5465–09–190–1–14 ಗ್ರಾಮೀಣ ಬಿ.ಪಿ.ಓ ಗಳು – 059 – ಇತರೆ ಖರ್ಚು" ಇದರಡಿಯಲ್ಲಿ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಭರಿಸತಕ್ಕದ್ದು.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಸೆಳೆದು (ಡ್ರಾ ಮಾಡಿ) ವಿತರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಸದರಿ ಅನುದಾನದ ಬಳಕೆಯ ಬಗ್ಗೆ ಸಂಬಂಧಪಟ್ಟ ಗ್ರಾಮೀಣ ಬಿ.ಪಿ.ಓ ಕೇಂದ್ರಗಳಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳೊಂದಿಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1645 ವೆಚ್ಚ–1/08, ದಿನಾಂಕ:15.12.2008 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 431 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ ರಚನೆ ಕುರಿತು.

**ಪ್ರಸ್ತಾವನೆ:**

ಬ್ರಿಟಿಷರ ಆಳ್ವಿಕೆ ವಿರುದ್ಧ ಪ್ರಪ್ರಥಮವಾಗಿ ಹೋರಾಡಿದ ಹಾಗೂ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ಸ್ವಾತಂತ್ರ್ಯದ ಕಿಚ್ಚು ಹೊತ್ತಿಸಿದ ವೀರರಾಣಿ ಕಿತ್ತೂರು ಚೆನ್ನಮ್ಮಾಜಿಯವರ ದೇಶಭಕ್ತಿ, ತ್ಯಾಗ ಮತ್ತು ಬಲಿದಾನಗಳನ್ನು ನಾಡಿನ ಜನತೆಗೆ ಮನವರಿಕೆ ಮಾಡಿಕೊಡುವ ದೃಷ್ಟಿಯಿಂದ ಹಾಗೂ ಚೆನ್ನಮ್ಮಾಜಿಯವರ ಮತ್ತು ಕ್ರಾಂತಿವೀರ ಸ್ವಾತಂತ್ರ್ಯಯೋಧ ಸಂಗೊಳ್ಳಿ ರಾಯಣ್ಣನವರು ಹುಟ್ಟಿ ಬೆಳೆದ ಕಾರ್ಯಕ್ಷೇತ್ರಗಳನ್ನು ಹಾಗೂ ಸ್ಮಾರಕಗಳನ್ನು ಮತ್ತು ಸಮಕಾಲೀನ ಕಿತ್ತೂರು ಪರಂಪರೆಯ ತಾಣಗಳನ್ನು ಸಂರಕ್ಷಿಸಿ ಅಭಿವೃದ್ಧಿಪಡಿಸಲು ಉದ್ದೇಶಿಸಿ ಸರ್ಕಾರವು ಕಿತ್ತೂರು ಅಭಿವೃದ್ಧಿ ಪ್ರಾಧಿಕಾರವನ್ನು ಸ್ಥಾಪಿಸಲು ತೀರ್ಮಾನಿಸಿರುತ್ತದೆ.

2) 2007–08ನೇ ಸಾಲಿನ ಆಯವ್ಯಯ ಮಂಡಿಸಿ ಆಯವ್ಯಯ ಭಾಷಣ ಮಾಡಿದ ಅಂದಿನ ಉಪ ಮುಖ್ಯಮಂತ್ರಿಯವರು ಹಾಗೂ ಹಣಕಾಸು ಸಚಿವರು ಕಿತ್ತೂರು ಅಭಿವೃದ್ಧಿ ಪ್ರಾಧಿಕಾರದ ಸ್ಥಾಪನೆಗಾಗಿ ರೂ.3 ಕೋಟಿಗಳನ್ನು ಒದಗಿಸಿರುವುದಾಗಿ ಘೋಷಣೆ ಮಾಡಿರುತ್ತಾರೆ. ಅದರಂತೆ ಕಂದಾಯ ಇಲಾಖೆಗೆ 2007–08ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ: 2250–00–800–2–15–059–ಇತರೆ ಖರ್ಚು (ಯೋಜನೆ) ಅಡಿಯಲ್ಲಿ ರೂ.300 ಲಕ್ಷಗಳನ್ನು ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ ಸ್ಥಾಪನೆಗಾಗಿ ಒದಗಿಸಲಾಗಿರುತ್ತದೆ.

3) ಕಿತ್ತೂರು ಅಭಿವೃದ್ಧಿ ಪ್ರಾಧಿಕಾರವನ್ನು ಸ್ಥಾಪಿಸಲು ಕರಡು ವಿಧೇಯಕವನ್ನು ಕರ್ನಾಟಕ ವಿಧಾನ ಮಂಡಲದ ಮುಂದೆ ಮಂಡಿಸಿ ಒಪ್ಪಿಗೆ ಪಡೆದು ಕಾಯ್ದೆ ರಚಿಸಬೇಕಾಗಿರುತ್ತದೆ. ಕರಡು ವಿಧೇಯಕವನ್ನು ಕರ್ನಾಟಕ ವಿಧಾನ ಮಂಡಲದ ಮುಂದೆ ಮಂಡಿಸಿ ಕಾಯ್ದೆ ರಚಿಸುವುದನ್ನು ಬಾಕಿ ಇಟ್ಟು, ಒಂದು ಕಾರ್ಯಾದೇಶ ಹೊರಡಿಸುವ ಮೂಲಕ ಕಿತ್ತೂರು ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲು ಸರ್ಕಾರ ತೀರ್ಮಾನಿಸಿದೆ. ಇದರಿಂದ ಪ್ರಾಧಿಕಾರವು ಅಸ್ತಿತ್ವಕ್ಕೆ ಬಂದು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಹಾಗೂ ಕಿತ್ತೂರು ಪರಂಪರೆಯ ತಾಣಗಳು ಮತ್ತು ಸ್ಮಾರಕಗಳನ್ನು ಸಂರಕ್ಷಿಸಿ ಅಭಿವೃದ್ಧಿಪಡಿಸಲು ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಲು ಅನುಕೂಲವಾಗುವುದು.

4) ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 115 ಆರ್‌ಇಹೆಚ್ 2007, ಬೆಂಗಳೂರು, ದಿನಾಂಕ: 13ನೇ ಜನವರಿ 2009**

ಕಿತ್ತೂರು ಪರಂಪರೆಯ ತಾಣಗಳು ಮತ್ತು ಸ್ಮಾರಕಗಳ ಅಭಿವೃದ್ಧಿಗಾಗಿ, ಅದರ ಉದ್ದೇಶ, ಯೋಜನೆ, ಆಡಳಿತ ವ್ಯವಸ್ಥೆ ಹಾಗೂ ಶಾಸನಬದ್ಧ ಚೌಕಟ್ಟುಗಳನ್ನು ಒಳಗೊಂಡಂತೆ ಒಂದು ಅಧಿನಿಯಮವನ್ನು ಜಾರಿಗೆ ತರುವುದನ್ನು ಬಾಕಿ ಇಟ್ಟು

ಸರ್ಕಾರವು ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡಂತೆ ಕಿತ್ತೂರು ಅಭಿವೃದ್ಧಿ ಪ್ರಾಧಿಕಾರವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಿ ಆದೇಶಿಸಿದೆ.

| | | |
|---|---|---|
| 1. | ಮಾನ್ಯ ಮುಖ್ಯಮಂತ್ರಿಗಳು | ಅಧ್ಯಕ್ಷರು |
| 2. | ಬೆಳಗಾವಿ ಜಿಲ್ಲಾ ಉಸ್ತುವಾರಿ ಸಚಿವರು | ಉಪಾಧ್ಯಕ್ಷರು |
| 3. | ಕಂದಾಯ ಸಚಿವರು | ಸದಸ್ಯರು |
| 4. | ಕನ್ನಡ ಮತ್ತು ಸಂಸ್ಕೃತಿ ಸಚಿವರು | ಸದಸ್ಯರು |
| 5. | ಪ್ರವಾಸೋದ್ಯಮ ಸಚಿವರು | ಸದಸ್ಯರು |
| 6. | ಲೋಕೋಪಯೋಗಿ ಸಚಿವರು | ಸದಸ್ಯರು |
| 7. | ಕಿತ್ತೂರು ಗ್ರಾಮವನ್ನು ಭಾಗಶಃ ಅಥವಾ ಪೂರ್ಣವಾಗಿ ಪ್ರತಿನಿಧಿಸುವ ಹಾಗೂ ಅದರ ಎಲ್ಲೆಯೊಳಗೆ ಚುನಾವಣಾ ಕ್ಷೇತ್ರವನ್ನು ಹೊಂದಿರುವ ಲೋಕಸಭಾ ಸದಸ್ಯರು, ವಿಧಾನಸಭೆ/ವಿಧಾನ ಪರಿಷತ್ ಸದಸ್ಯರು. | ಸದಸ್ಯರು |
| 8. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | ಸದಸ್ಯರು |
| 9. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹಣಕಾಸು ಇಲಾಖೆ | ಸದಸ್ಯರು |
| 10. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸದಸ್ಯರು |
| 11. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 12. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ | ಸದಸ್ಯರು |
| 13. | ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ | ಸದಸ್ಯರು |
| 14. | ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ | ಸದಸ್ಯರು |
| 15. | ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ | ಸದಸ್ಯರು |
| 16. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾವಿ | ಸದಸ್ಯರು |
| 17. | ಜಂಟಿ ನಿರ್ದೇಶಕರು, ಕರ್ನಾಟಕ ಭೂಸೇನಾ ನಿಗಮ, ಬೆಳಗಾವಿ. | ಸದಸ್ಯರು |
| 18. | ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ. | ಸದಸ್ಯರು |
| 19. | ಅಧ್ಯಕ್ಷರು, ಗ್ರಾಮಪಂಚಾಯತ್, ಕಿತ್ತೂರು | ಸದಸ್ಯರು |
| 20. | ನಿರ್ದೇಶಕರು, ಕರ್ನಾಟಕ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ | ಸದಸ್ಯರು |
| 21. | ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ಮೂವರನ್ನು ಮೀರದ ಅಧಿಕಾರೇತರ ಸದಸ್ಯರು | ಸದಸ್ಯರು |
| 22. | ಸರ್ಕಾರದಿಂದ ನೇಮಿಸಲ್ಪಡುವ ಕಿತ್ತೂರು ಇತಿಹಾಸ ಹಾಗೂ ಪರಂಪರೆಯಲ್ಲಿ ಅನುಭವ ಹೊಂದಿರುವ 5 ಜನ ತಜ್ಞರು | ಸದಸ್ಯರು |
| 23. | ಪ್ರಾಧಿಕಾರದ ಆಯುಕ್ತರು | ಸದಸ್ಯ–ಕಾರ್ಯದರ್ಶಿ |

2) ಪ್ರಾಧಿಕಾರವು ಅನುಬಂಧದಲ್ಲಿ ನಮೂದಿಸಿರುವ ಕಿತ್ತೂರು ಪರಂಪರೆಯ ತಾಣಗಳು ಮತ್ತು ಸ್ಮಾರಕಗಳನ್ನು ಅಭಿವೃದ್ಧಿಪಡಿಸಲು ಕ್ರಮಕೈಗೊಳ್ಳುವುದು. ಅಭಿವೃದ್ಧಿ ಕಾಮಗಾರಿಗಳಿಗಾಗಿ ತಗಲುವ ವೆಚ್ಚವನ್ನು ಸರ್ಕಾರದಿಂದ ಈ ಉದ್ದೇಶಕ್ಕಾಗಿ ಬಿಡುಗಡೆ ಮಾಡಿರುವ ಅನುದಾನದಿಂದ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪುನರ್ವಸತಿ ಮತ್ತು ಭೂಸ್ವಾಧೀನ–2).

**ಅನುಬಂಧ**

**ಕಿತ್ತೂರು ಪರಂಪರೆಯ ತಾಣಗಳು ಮತ್ತು ಸ್ಮಾರಕಗಳು**

1) ಕಿತ್ತೂರು ಕೋಟೆ

2) ಗಡಾದ ಮರಡಿ

3) ಕಲ್ಮಠ (ಯೋಧರ ಸಮಾಧಿಗಳು)
4) ಚೌಕಿಮಠ (ಸಮಾಧಿಗಳು)
5) ಚನ್ನಮ್ಮನ ಸಮಾಧಿ ಬೈಲಹೊಂಗಲ
6) ಸಂಗೊಳ್ಳಿ ರಾಯಣ್ಣ ಸಮಾಧಿ ನಂದಗಡ ತಾ:ಖಾನಾಪೂರ
7) ಸಂಗೊಳ್ಳಿ ಗ್ರಾಮದಲ್ಲಿ ಸಂಗೊಳ್ಳಿ ರಾಯಣ್ಣನ ಮೂರ್ತಿ ಅಭಿವೃದ್ಧಿ
8) ಕಾಕತಿ ಕೋಟೆ
9) ಅಮಟೂರ ಬಾಳಪ್ಪನ ಮೂರ್ತಿ
10) ಕಿತ್ತೂರಿನ ಐತಿಹಾಸಿಕ ಗ್ರಂಥಾಲಯ
11) ಪ್ರಾಚ್ಯವಸ್ತು ಸಂಗ್ರಹಾಲಯ
12) ಹುಬ್ಬಳ್ಳಿ ಮೂರು ಸಾವಿರ ಮಠದಲ್ಲಿರುವ ಅವಿಶೇಷಗಳ ರಕ್ಷಣೆ.
13) ಎನ್‌ಎಚ್–4 ರಿಂದ ಕೋಟೆವರೆಗೆ ರಸ್ತೆ ಮೇಲ್ದರ್ಜೆಗೇರಿಸುವುದು.
14) ತೋಟಗಾರಿಕೆ ಅಧೀನದಲ್ಲಿರುವ (ಕಿಲ್ಲಾದಲ್ಲಿ) 7 ಎಕರೆ ಜಮೀನನ್ನು ಹೂದೋಟವಾಗಿ ಮಾರ್ಪಡಿಸುವುದು.
15) ವಿಚಾರ ಸಂಕೀರ್ಣ ಕೊಠಡಿ
16) ಕಿತ್ತೂರ ನಾಡ ಜಾನಪದ ಸಂಗ್ರಹ
17) ಸಂಪಗಾಂವ ಜೈಲು ಸಂರಕ್ಷಣೆ
18) ಕಿಲ್ಲಾದಲ್ಲಿರುವ ಗ್ರಾಮದೇವತೆ ಹಾಗೂ ಮಾರುತಿ ದೇವಸ್ಥಾನ
19) ಪ್ರವಾಸೋದ್ಯಮ ಇಲಾಖೆಯಿಂದ ಪರಂಪರೆಯ ಪ್ರಚಾರ ಕೈಗೊಳ್ಳುವುದು.
20) ಬಸವೇಶ್ವರ ದೇವಸ್ಥಾನ (ಹೊಂಡ ಬಸವಣ್ಣ) ಕಿತ್ತೂರ (ಬಸ್ಸಾಪೂರ)
21) ಚಿಕ್ಕನಂದಿಹಳ್ಳಿ ಬಸವೇಶ್ವರ ದೇವಸ್ಥಾನ
22) ನಿಚ್ಚಣಕಿ ಮಠ
23) ತುಂಬಿಗೇರಿ ಕೆರೆ
24) ಪರಸನಟ್ಟಿ ಕೆರೆ
25) ದೇಶನೂರ
26) ವಣ್ಣೂರ
27) ದೇಗಾಂವ
28) ದೇಗಲೊಳ್ಳಿ
29) ಮೇಕಲಮರ್ಡಿ
30) ಬೆಳವಡಿ
31) ಸೋಮವಾರ ಪೇಟ ಚನ್ನಮ್ಮನ ವೃತ್ತ ಕಿತ್ತೂರ
32) ಅರಳಿಕಟ್ಟಿ ಕಿತ್ತೂರು
33) ಅರಭಾವಿ
34) ಹೆಬ್ಬಾಳಿ ಬಾವಿ

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 471

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಪುನರ್ವಸತಿ ಮತ್ತು ಭೂಸ್ವಾಧೀನ–2).

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಪಿ.ಎಸ್. ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್, ಇವರ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ಸೇವೆಗೆ ಪುನರ್ ಸ್ಥಾಪಿಸುವ ಕುರಿತು–ಆದೇಶ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಬೀದರ್, ಕಚೇರಿಯ ಆದೇಶ ಸಂಖ್ಯೆ: ಕಂ/ಸಿಬ್ಬಂದಿ/ಸಿಆರ್/ಜಿಎ/2008–09/4770 ದಿ: 16.08.2008.
2. ಜಿಲ್ಲಾಧಿಕಾರಿಗಳು, ಬೀದರ್, ಕಚೇರಿಯ ಆದೇಶ ಸಂಖ್ಯೆ: ಕಂ/ಸಿಬ್ಬಂದಿ/ಸಿಆರ್/ಜಿಎ/2008–09/5598 ದಿ: 16.08.2008.
3. ಸರ್ಕಾರದ ಆದೇಶ ಸಂಖ್ಯೆ: ಮಮಇ 460 ಎಸ್‌ಜೆಡಿ 2008 ದಿ: 23.12.2008.

**ಪ್ರಸ್ತಾವನೆ:**

ಬೀದರ್ ನಗರದಲ್ಲಿ ನಡೆಯುತ್ತಿರುವ ಅಂಗನವಾಡಿ ಕೇಂದ್ರಗಳ ಕಾರ್ಯನಿರ್ವಹಣೆ ಬಗ್ಗೆ ಸಾರ್ವಜನಿಕರಿಂದ ಹಾಗೂ ಚುನಾಯಿತ ಪ್ರತಿನಿಧಿಗಳಿಂದ ಅನೇಕ ಬಾರಿ ದೂರುಗಳು ಬಂದ ಹಿನ್ನೆಲೆಯಲ್ಲಿ, ಅಂಗನವಾಡಿ ಕೇಂದ್ರಗಳ ತಪಾಸಣೆಯನ್ನು ಹಿರಿಯ ಅಧಿಕಾರಿಗಳಿಂದ ನಡೆಸಿ ಕೇಂದ್ರಗಳ ತಪಾಸಣೆ ಬಳಿಕ ನ್ಯೂನತೆಗಳು ಇರುವುದು ವರದಿಯಾಗಿರುವ ಕುರಿತು ದಿ: 16.08.2008ರ ಜನಸ್ಪಂದನ ಸಮಿತಿ ಸಭೆಯಲ್ಲಿ ವಿವರವಾಗಿ ಚರ್ಚಿಸಿ ತಪಾಸಣೆ ತಂಡದವರ ಅಭಿಪ್ರಾಯದ ಪ್ರಕಾರ ಅಂಗನವಾಡಿ ಕೇಂದ್ರಗಳ ಕಾರ್ಯನಿರ್ವಹಣೆ ತೃಪ್ತಿಕರವಾಗಿಲ್ಲದಿರುವುದನ್ನು ಮನಗಂಡು, ಅನೇಕ ಅಂಗನವಾಡಿ ಕೇಂದ್ರಗಳಿಗೆ ವರ್ಷ ಕಳೆದರೂ ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಉಪ ನಿರ್ದೇಶಕರು ಹಾಗೂ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಮತ್ತು ಶ್ರೀ ಪಿ.ಎಸ್.ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬೀದರ್, ಇವರುಗಳು ನಿಯಮಿತವಾಗಿ ಭೇಟಿ ನೀಡಿ ಮೇಲ್ವಿಚಾರಣೆ ಮಾಡದೆ ಇರುವುದರಿಂದ ಈ ಕಾರ್ಯಕ್ರಮವು ಒಂದು ಖೋಟಾ ಕಾರ್ಯಕ್ರಮವಾಗಿ ಪರಿಗಣಿಸಿದ್ದು, ಮಕ್ಕಳು ಹಾಗೂ ಸ್ತ್ರೀಯರಿಗಾಗಿ ರೂಪಿಸಿದ ಕಾರ್ಯಕ್ರಮವನ್ನು ಬುಡಮೇಲು ಮಾಡಿದಂತಾಗಿರುವುದು ಮೇಲ್ನೋಟಕ್ಕೆ ಕಂಡು ಬಂದ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿ, ಬೀದರ್ ರವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿ: 16.08.2008 ರ ಆದೇಶದಲ್ಲಿ ಶ್ರೀ ರಾಮಕೃಷ್ಣ ಟಿ.ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಹಾಗೂ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿ: 16.08.2008ರ ಆದೇಶದಲ್ಲಿ ಶ್ರೀ ಪಿ.ಎಸ್. ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬೀದರ್, ಇವರುಗಳನ್ನು ಅಮಾನತ್ತುಗೊಳಿಸಿ ಆದೇಶ ಹೊರಡಿಸಿರುತ್ತಾರೆ.

ಜಿಲ್ಲಾಧಿಕಾರಿ, ಬೀದರ್ ರವರು ಅಮಾನತ್ತುಗೊಳಿಸಿ ಹೊರಡಿಸಿರುವ ದಿ:16.8.2008 ರ ಆದೇಶವನ್ನು ಪ್ರಶ್ನಿಸಿ ಶ್ರೀ ರಾಮಕೃಷ್ಣ ಟಿ.ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ: 4069/2008 ರಲ್ಲಿ ಮೊಕದ್ದಮೆ ಹೂಡಿ, ಜಿಲ್ಲಾಧಿಕಾರಿ, ಬೀದರ್ ರವರು ಅಮಾನತ್ತುಗೊಳಿಸಿ ಹೊರಡಿಸಿರುವ ದಿ: 16.08.2008 ರ ಆದೇಶವನ್ನು ರದ್ದುಗೊಳಿಸುವಂತೆ ಕೋರಲಾಗಿದ್ದು, ಸದರಿ ಪ್ರಕರಣವನ್ನು ಮಾನ್ಯ ನ್ಯಾಯಮಂಡಳಿಯು ದಿ: 13.10.2008 ರಂದು ವಿಚಾರಣೆ ನಡೆಸಿ ಶಿಸ್ತು ಪ್ರಾಧಿಕಾರವಲ್ಲದ ಹಾಗೂ ಜಿಲ್ಲಾಧಿಕಾರಿಗಳಿಗೆ ಗ್ರೂಪ್ 'ಎ' ಅಧಿಕಾರಿಯನ್ನು ಅಮಾನತ್ತುಗೊಳಿಸಲು ಅಧಿಕಾರವಿಲ್ಲದಿದ್ದರೂ ಸಹ ಜಿಲ್ಲಾಧಿಕಾರಿಗಳು, ಬೀದರ್‌ರವರು ದಿ: 16.08.2008 ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ಗಂಭೀರವಾಗಿ ಪರಿಗಣಿಸಿ ಜಿಲ್ಲಾಧಿಕಾರಿಗಳಿಗೆ ರೂ.5,000/– ಗಳನ್ನು ದಂಡವನ್ನಾಗಿ ಪಾವತಿಸುವಂತೆ ಹಾಗೂ ಜಿಲ್ಲಾಧಿಕಾರಿಗಳು ಹೊರಡಿಸಿರುವ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ತೀರ್ಪು ನೀಡಿರುತ್ತದೆ. ಮಾನ್ಯ ನ್ಯಾಯಮಂಡಳಿಯು ದಿ: 13.10.2008 ರಂದು ನೀಡಿರುವ ತೀರ್ಪನ್ನು ಕಾನೂನು ಕೋಶದ ಮುಖ್ಯಸ್ಥರು ಪರಿಶೀಲಿಸಿ ಸದರಿ ತೀರ್ಪು ಮೇಲ್ಮನವಿಗೆ ಅರ್ಹ ಪ್ರಕರಣವಲ್ಲವೆಂದು ತಿಳಿಸಿರುತ್ತಾರೆ. ಸರ್ಕಾರವು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿ: 13.10.2008 ರ ತೀರ್ಪು ಹಾಗೂ ಕಾನೂನು ಕೋಶದ ಮುಖ್ಯಸ್ಥರು ನೀಡಿರುವ ಅಭಿಪ್ರಾಯ ಹಾಗೂ ಪ್ರಕರಣದ ವಾಸ್ತವಾಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿ: 23.12.2008 ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು ಬೀದರ್ ರವರು ಶ್ರೀ ರಾಮಕೃಷ್ಣ ಟಿ.ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರನ್ನು ಕಚೇರಿ ಆದೇಶ ಸಂಖ್ಯೆ: ಸಿಬ್ಬಂದಿ/ಸಿಆರ್/ಜಿಎ/2008–09/4770 ದಿ: 16.08.2008 ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಇವರ ವಿರುದ್ಧ ಇರುವ ಆರೋಪಗಳನ್ನು ಹಿಂಪಡೆದು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ಪುನರ್ ಸ್ಥಾಪಿಸಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಗುಲ್ಬರ್ಗಾ ಇಲ್ಲಿನ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಅವರು ಇನ್ನು ಮುಂದೆ ಅವರ ಕಾರ್ಯನಿರ್ವಹಣೆಯಲ್ಲಿ ಎಚ್ಚರಿಕೆ ವಹಿಸುವಂತೆ ಅವರಿಗೆ ಒಂದು ಆಡಳಿತಾತ್ಮಕ ಎಚ್ಚರಿಕೆಯನ್ನು ನೀಡಿದೆ.

ಶ್ರೀ ಪಿ.ಎಸ್.ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬೀದರ್ ಹಾಗೂ ಶ್ರೀ ರಾಮಕೃಷ್ಣ ಟಿ.ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರುಗಳ ಪ್ರಕರಣ ಒಂದೇ ಆಗಿದ್ದು, ಈ ಇಬ್ಬರು ಅಧಿಕಾರಿಗಳನ್ನು ಜಿಲ್ಲಾಧಿಕಾರಿ, ಬೀದರ್ ರವರು ಅಮಾನತ್ತುಗೊಳಿಸಿದ್ದು, ಇವರುಗಳ ಪೈಕಿ ಶ್ರೀ ರಾಮಕೃಷ್ಣ ಟಿ.ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್, ಇವರನ್ನು ಜಿಲ್ಲಾಧಿಕಾರಿಗಳು, ಬೀದರ್‌ರವರು ದಿನಾಂಕ: 16.08.2008 ರದು ಅಮಾನತ್ತುಗೊಳಿಸಿ ಆದೇಶವನ್ನು ರದ್ದುಪಡಿಸಿ ಇವರ ವಿರುದ್ಧ ಇರುವ ಆರೋಪಗಳನ್ನು ಹಿಂಪಡೆದು ದಿ: 23.12.2008 ರಂದು ಆದೇಶ ಹೊರಡಿಸಿರುವ ಹಿನ್ನೆಲೆಯಲ್ಲಿ, ಶ್ರೀ ಪಿ.ಎಸ್.ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬೀದರ್, ಇವರ ಪ್ರಕರಣದಲ್ಲಿ ಕೂಡ ಜಿಲ್ಲಾಧಿಕಾರಿ ಬೀದರ್ ರವರು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಮಇ 460 ಎಸ್‌ಜೆಡಿ 2008 (ಭಾಗ–1), ಬೆಂಗಳೂರು, ದಿನಾಂಕ: 3ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಜಿಲ್ಲಾಧಿಕಾರಿ, ಬೀದರ್‌ರವರು ಶ್ರೀ ಪಿ.ಎಸ್. ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್, ಇವರನ್ನು ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ/ಸಿಆರ್/ಜಿಎ/2008–09/5598 ದಿ: 16.08.2008 ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಇವರ ವಿರುದ್ಧದ ಪ್ರಕರಣದ ಬಗ್ಗೆ ಪರಿಶೀಲನೆಯನ್ನು ಬಾಕಿ ಇರಿಸಿ ಅವರನ್ನು ಈ ತಕ್ಷಣದಂದ ಜಾರಿಗೆ ಬರುವಂತೆ ಸೇವೆಗೆ ಪುನರ್ ಸ್ಥಾಪಿಸಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇಲ್ಲಿ ಖಾಲಿ ಇರುವ ನಿರೂಪಣಾಧಿಕಾರಿ ಹುದ್ದೆಗೆ (ಸ್ವಂತ ವೇತನ ಶ್ರೇಣಿಯ ಮೇಲೆ) ಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 480

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ),
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಸಮಾಜ ಕಲ್ಯಾಣ ಇಲಾಖೆಯಲ್ಲಿ ಬರುವ ನಿಗಮಗಳಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡುವ ಸಮಿತಿಗಳಿಗೆ ಶಾಸಕರನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಕಇ 22 ಎಸ್‌ಡಿಸಿ 2000, ದಿ:14.10.2003.
2. ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಎಲ್ 61 ಎಸ್‌ಎಲ್‌ಪಿ 91, ದಿ:19.05.1992.
3. ಸರ್ಕಾರದ ಆದೇಶ ಸಂಖ್ಯೆ:ಸಕಇ 18 ಎಸ್‌ಡಿಸಿ 2001, ದಿ:12.03.2001.
4. ಟಿಪ್ಪಣಿ ಸಂಖ್ಯೆ:ಸಿಎಂ/4538/ಎಸ್‌ಐಪಿ/2008, ದಿ:25.11.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಕರ್ನಾಟಕ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ, ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಮತ್ತು ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಗಳು ಜಾರಿಗೊಳಿಸುತ್ತಿರುವ ಗಂಗಾ ಕಲ್ಯಾಣ ಯೋಜನೆಯಡಿ ಫಲಾನುಭವಿಗಳನ್ನು ಹಾಗೂ ಜಮೀನುಗಳನ್ನು ಗುರುತಿಸುವ ಸಲುವಾಗಿ ಸಮಿತಿಯನ್ನು ಈ ಕೆಳಕಂಡಂತೆ ಪುನರ್‌ರಚಿಸಲಾಗಿದೆ.

| | | |
|---|---|---|
| 1. | ವಿಧಾನ ಸಭಾ ಕ್ಷೇತ್ರದ ಶಾಸಕರು | ಅಧ್ಯಕ್ಷರು |
| 2. | ತಾಲ್ಲೂಕಿನಲ್ಲಿ ಖಾಯಂ ಆಗಿ ವಾಸಿಸುತ್ತಿರುವ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 3. | ತಾಲ್ಲೂಕು ಕಾರ್ಯನಿರ್ವಹಣಾಧಿಕಾರಿ | ಸದಸ್ಯರು |
| 4. | ಸಹಾಯಕ ಕಾರ್ಯಪಾಲಕ ಅಭಿಯತರರು ಜಿಲ್ಲಾ ಪಂಚಾಯತ್ | ಸದಸ್ಯರು |
| 5. | ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ | ಸದಸ್ಯರು |
| 6. | ಸಹಾಯಕ ಕಾರ್ಯಪಾಲಕ ಅಭಿಯಂತರರು, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ) | ಸದಸ್ಯರು |
| 7. | ತಾಲ್ಲೂಕು ಸಹಾಯಕ ನಿರ್ದೇಶಕರು, ಕೈಗಾರಿಕಾ ಇಲಾಖೆ | ಸದಸ್ಯರು |
| 8. | ಸಂಬಂಧಿಸಿದ ತಾಲ್ಲೂಕು ತಹಶೀಲ್ದಾರರು | ಸದಸ್ಯರು |
| 9. | ತಾಲ್ಲೂಕಿನ ಸಹಾಯಕ ನಿರ್ದೇಶಕರು, ಕೃಷಿ ಇಲಾಖೆ | ಸದಸ್ಯರು |
| 10. | ತಾಲ್ಲೂಕಿನ ಸಹಾಯಕ ನಿರ್ದೇಶಕರು, ತೋಟಗಾರಿಕಾ ಇಲಾಖೆ | ಸದಸ್ಯರು |
| 11. | ಸಂಬಂಧಿಸಿದ ಜಿಲ್ಲೆಯ ಅರಣ್ಯಾಧಿಕಾರಿ | ಸದಸ್ಯರು |
| 12. | ಹಿಂದುಳಿದ ವರ್ಗಗಳ ಇಲಾಖೆಯ ನಿರೀಕ್ಷಕರು | ಸದಸ್ಯರು |
| 13. | ಕರ್ನಟಕ ಪರಿಶಿಷ್ಟ ಜಾತಿ/ವರ್ಗಗಳ ಅಭಿವೃದ್ಧಿ ನಿಗಮದ ತಾಲ್ಲೂಕು ಅಭಿವೃದ್ಧಿ ಅಧಿಕಾರಿ ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದ ಅಭಿವೃದ್ಧಿ ಅಧಿಕಾರಿ/ಅಭಿವೃದ್ಧಿ ಸಹಾಯಕರು (ಆಯಾ ನಿಗಮಕ್ಕೆ ಸಂಬಂಧಿಸಿದವರು). | ಸದಸ್ಯ ಕಾರ್ಯದರ್ಶಿ |

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಈ ಕೆಳಕಂಡಂತೆ ಸಮಿತಿ ರಚಿಸಿದೆ.

| | | |
|---|---|---|
| 1. | ಸಮಾಜ ಕಲ್ಯಾಣ ಸಚಿವರು | ಅಧ್ಯಕ್ಷರು |
| 2. | ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಮತ್ತು ಕಾರ್ಮಿಕ ಇಲಾಖೆ | ಸದಸ್ಯರು |
| 3. | ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 4. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ | ಸದಸ್ಯ ಕಾರ್ಯದರ್ಶಿ |

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಈ ಕೆಳಕಂಡಂತೆ ಸಮಿತಿ ರಚಿಸಿದೆ.

| | | |
|---|---|---|
| 1. | ಸಮಾಜ ಕಲ್ಯಾಣ ಸಚಿವರು | ಅಧ್ಯಕ್ಷರು |
| 2. | ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಮತ್ತು ಕಾರ್ಮಿಕ ಇಲಾಖೆ | ಸದಸ್ಯರು |
| 3. | ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 4. | ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ | ಸದಸ್ಯರು |
| 5. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ | ಸದಸ್ಯ ಕಾರ್ಯದರ್ಶಿ |

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಮಾನ್ಯ ಮುಖ್ಯಂತ್ರಿಯವರ ಟಿಪ್ಪಣಿಯಲ್ಲಿ ಸಮಾಜ ಕಲ್ಯಾಣ ಇಲಾಖೆಯ ವ್ಯಾಪ್ತಿಗೆ ಬರುವ ನಿಗಮಗಳಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡುವ ಸಮಿತಿಗಳಿಗೆ ಶಾಸಕರನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡಲು ಸೂಚಿಸಿದ್ದು, ಅಂತೆಯೇ ಈ ಕೆಳಕಂಡ ನಿಗಮಗಳಲ್ಲಿ ಕ್ಷೇತ್ರಾವಾರು, ತಾಲ್ಲೂಕುವಾರು, ಜಿಲ್ಲಾವಾರು ಸಮಿತಿಗಳನ್ನು ನೇಮಕ ಮಾಡಿ ಸಮಿತಿಗಳಿಗೆ ಶಾಸಕರನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡಬೇಕಿರುತ್ತದೆ. ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 221 ಬಿಸಿಎ 2008, ಬೆಂಗಳೂರು, ದಿನಾಂಕ: 2ನೇ ಜನವರಿ 2009**

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಸಮಾಜ ಕಲ್ಯಾಣ ಇಲಾಖೆಯ ವ್ಯಾಪ್ತಿಗೆ ಬರುವ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಮತ್ತು ಡಾ:ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಇವರು ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಫಲಾನುಭವಿಗಳನ್ನು ಆಯ್ಕೆ ಮಾಡಲು ಈ ಕೆಳಕಂಡಂತೆ ಅಧ್ಯಕ್ಷರು/ಸದಸ್ಯರನ್ನೊಳಗೊಂಡ ಆಯ್ಕೆ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | | |
|---|---|---|
| 1. | ವಿಧಾನ ಸಭಾ ಕ್ಷೇತ್ರದ ಶಾಸಕರು | ಅಧ್ಯಕ್ಷರು |
| 2. | ತಾಲ್ಲೂಕಿನಲ್ಲಿ ಖಾಯಂ ಆಗಿ ವಾಸಿಸುತ್ತಿರುವ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 3. | ತಾಲ್ಲೂಕು ಕಾರ್ಯನಿರ್ವಹಣಾಧಿಕಾರಿ | ಸದಸ್ಯರು |
| 4. | ಸಹಾಯಕ ಕಾರ್ಯಪಾಲಕ ಅಭಿಯಂತರರು ಜಿಲ್ಲಾ ಪಂಚಾಯತ್ | ಸದಸ್ಯರು |
| 5. | ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ | ಸದಸ್ಯರು |
| 6. | ಸಹಾಯಕ ಕಾರ್ಯಪಾಲಕ ಅಭಿಯಂತರರು, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ) | ಸದಸ್ಯರು |
| 7. | ತಾಲ್ಲೂಕು ಸಹಾಯಕ ನಿರ್ದೇಶಕರು, ಕೈಗಾರಿಕಾ ಇಲಾಖೆ | ಸದಸ್ಯರು |
| 8. | ಸಂಬಂಧಿಸಿದ ತಾಲ್ಲೂಕು ತಹಶೀಲ್ದಾರರು | ಸದಸ್ಯರು |
| 9. | ತಾಲ್ಲೂಕಿನ ಸಹಾಯಕ ನಿರ್ದೇಶಕರು, ಕೃಷಿ ಇಲಾಖೆ | ಸದಸ್ಯರು |
| 10. | ತಾಲ್ಲೂಕಿನ ಸಹಾಯಕ ನಿರ್ದೇಶಕರು, ತೋಟಗಾರಿಕಾ ಇಲಾಖೆ | ಸದಸ್ಯರು |
| 11. | ಸಂಬಂಧಿಸಿದ ಜಿಲ್ಲೆಯ ಅರಣ್ಯಾಧಿಕಾರಿ | ಸದಸ್ಯರು |
| 12. | ಹಿಂದುಳಿದ ವರ್ಗಗಳ ಇಲಾಖೆಯ ನಿರೀಕ್ಷಕರು | ಸದಸ್ಯರು |
| 13. | ಕರ್ನಾಟಕ ಪರಿಶಿಷ್ಟ ಜಾತಿ/ವರ್ಗಗಳ ಅಭಿವೃದ್ಧಿ ನಿಗಮದ ತಾಲ್ಲೂಕು ಅಭಿವೃದ್ಧಿ ಅಧಿಕಾರಿ ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದ ಅಭಿವೃದ್ಧಿ ಅಧಿಕಾರಿ/ಅಭಿವೃದ್ಧಿ ಸಹಾಯಕರು (ಆಯಾ ನಿಗಮಕ್ಕೆ ಸಂಬಂಧಿಸಿದವರು). | ಸದಸ್ಯ ಕಾರ್ಯದರ್ಶಿ |

ಈ ಸಮಿತಿಯು ಈ ಕೆಳಕಂಡ ಕಾರ್ಯಗಳನ್ನು ನಿರ್ವಹಿಸುವುದು.

1. ಗಂಗಾ ಕಲ್ಯಾಣ ಯೋಜನೆಯಡಿ ಫಲಾನುಭವಿಗಳನ್ನು ಆಯ್ಕೆ ಮಾಡುವುದು.
2. ಈ ಕಾರ್ಯಕ್ರಮವು ಯಶಸ್ವಿಯಾಗಿ ಕಾರ್ಯಗತವಾಗಲು ಸಲಹೆ ನೀಡುವುದು.
3. ಯೋಜನೆಯಲ್ಲಿ ಲೋಪದೋಷಗಳು ಕಂಡುಬಂದರೆ ಅಂತಹವುಗಳನ್ನು ನಿವಾರಿಸಲು ಸಲಹೆ ನೀಡುವುದು.
4. ಗುಣಮಟ್ಟದ ಸಲಕರಣೆಗಳನ್ನು ಅಳವಡಿಸಲು ಸಲಹೆ ನೀಡುವುದು.

5. ಫಲಾನುಭವಿಗಳು ಇದರ ಪೂರ್ಣ ಲಾಭ ಪಡೆಯಲು ಅವರಿಗೆ ಅಗತ್ಯ ಪ್ರೇರೇಪಣೆ ನೀಡುವುದು.
6. ಫಲಾನುಭವಿಗಳಿಗೆ ಯೋಜನೆಯ ಪೂರ್ಣಲಾಭ ಪಡೆಯಲು ಬೇರೆ ಇಲಾಖೆಯಿಂದ ನೆರವು ಅಥವಾ ಸಹಾಯ ಅಗತ್ಯವಾದಲ್ಲಿ ಅಂತಹ ಸಹಾಯ ಮತ್ತು ನೆರವನ್ನು ಸಂಬಂಧಿಸಿದ ಇಲಾಖೆಗಳಿಂದ ಒದಗಿಸಿಕೊಡಲು ಸಲಹೆ ನೀಡುವುದು.
7. ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಾದ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವರ್ಗಗಳಿಗೆ ಸೇರಿದ ರೈತರ ಬಗ್ಗೆ ವಿವರಗಳನ್ನು ಪಟ್ಟಿ ಮಾಡಿ ನಿರ್ವಹಿಸುವುದು.
8. ಈ ಸಮಿತಿಯ ಸಲಹೆಗಳನ್ನು ಘಟಕದ ಆರ್ಥಿಕ ನೀತಿಗೆ ಒಳಪಟ್ಟು ಅಧಿಕಾರಿಗಳು ಪರಿಶೀಲಿಸಿ ಪರಿಪಾಲನೆ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಬ್ಬಯ್ಯ**

ಪಿ.ಆರ್. 483 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

**ಸೇರ್ಪಡೆ ಆದೇಶ**

**ಸಂಖ್ಯೆ: ಸಕಇ 193 ಬಿಸಿಎ 2007, ಬೆಂಗಳೂರು, ದಿನಾಂಕ: 27ನೇ ಜನವರಿ 2009**

ಸರ್ಕಾರದ ಆದೇಶ ಸಂಖ್ಯೆ: ಸಕಇ 225 ಬಿಸಿಎ 2000, ದಿನಾಂಕ: 30.03.2002ರಲ್ಲಿನ ಪ್ರವರ್ಗ–III(ಬಿ)ಯ ಕ್ರಮ ಸಂಖ್ಯೆ:1(ಬಿ) ಅಡಿಯಲ್ಲಿ ಈ ಕೆಳಕಂಡ ವೀರಶೈವ ಲಿಂಗಾಯಿತ 19 ಉಪ ಜಾತಿಗಳನ್ನು ಸೇರ್ಪಡೆ ಮಾಡಲಾಗಿದೆ ಹಾಗೂ ಪ್ರವರ್ಗ–III(ಬಿ)ಗೆ ಹಾಲಿ ಜಾರಿಯಲ್ಲಿರುವ ಶೇ.5 ರಷ್ಟು ಮೀಸಲಾತಿಯನ್ನು ಮುಂದುವರೆಸಲಾಗಿದೆ.

| ಕ್ರ. ಸಂ. | ಜಾತಿಯ ಹೆಸರು | Caste Name |
|---|---|---|
| 1. | ಲಿಂಗಾಯಿತ/ವೀರಶೈವ–ಕುಡುಒಕ್ಕಲ | Lingayath/Veerashaiva-Kuduvokkala |
| 2. | ಲಿಂಗಾಯಿತ/ವೀರಶೈವ–ಲಾಳಗೊಂಡ | Lingayath/Veerashaiva-Lalagonda |
| 3. | ಲಿಂಗಾಯಿತ/ವೀರಶೈವ–ಹೂಗಾರ | Lingayath/Veerashaiva-Hoogara |
| 4. | ಲಿಂಗಾಯಿತ/ವೀರಶೈವ–ವೀರಶೈವ ಜಂಗಮ | Lingayath/Veerashaiva-Veerashiva Jangama |
| 5. | ಲಿಂಗಾಯಿತ/ವೀರಶೈವ–ವೀರಶೈವ ಬೇಡುವ ಜಂಗಮ | Lingayath/Veerashaiva-Veerashiva Beduva Jangama |
| 6. | ಲಿಂಗಾಯಿತ/ವೀರಶೈವ–ಬಣಜಿಗ | Lingayath/Veerashaiva-Banajiga |
| 7. | ಲಿಂಗಾಯಿತ/ವೀರಶೈವ–ಆದಿ ಬಣಜಿಗ | Lingayath/Veerashaiva-Adi Banagara |
| 8. | ಲಿಂಗಾಯಿತ/ವೀರಶೈವ–ಬಣಗಾರ | Lingayath/Veerashaiva-Banagara |
| 9. | ಲಿಂಗಾಯಿತ/ವೀರಶೈವ–ಗಾಣಿಗ | Lingayath/Veerashaiva-Ganiga |
| 10. | ಲಿಂಗಾಯಿತ/ವೀರಶೈವ–ನಗರ್ತ | Lingayath/Veerashaiva-Nagarata |
| 11. | ಲಿಂಗಾಯಿತ/ವೀರಶೈವ–ಶಿವಾಚಾರ ನಗರ್ತ | Lingayath/Veerashaiva-Shivaachara Nagarta |
| 12. | ಲಿಂಗಾಯಿತ/ವೀರಶೈವ–ಆದಿ ವೀರಶೈವ | Lingayath/Veerashaiva-Adi Veerashaiva |
| 13. | ಲಿಂಗಾಯಿತ/ವೀರಶೈವ–ವೀರಶೈವ ಪಂಚಮಸಾಲಿ | Lingayath/Veerashaiva-Veerashaiva Panchamasali |
| 14. | ಲಿಂಗಾಯಿತ/ವೀರಶೈವ–ಕುರುಹೀನಶೆಟ್ಟಿ/ನೇಯ್ಗೆ/ನೇಕಾರ/ಜಾಡ | Lingayath/Veerashaiva-Kuruheenashetty/Neyge/Nekara/Jada |
| 15. | ಲಿಂಗಾಯಿತ/ವೀರಶೈವ–ಶಿವಸಿಂಪಿ | Lingayath/Veerashaiva-Shivasimpi |
| 16. | ಲಿಂಗಾಯಿತ/ವೀರಶೈವ–ರೆಡ್ಡಿ | Lingayath/Veerashaiva-Reddy |
| 17. | ಲಿಂಗಾಯಿತ/ವೀರಶೈವ–ಸಾದರ | Lingayath/Veerashaiva-Sadara |
| 18. | ಲಿಂಗಾಯಿತ/ವೀರಶೈವ–ಆರಾಧ್ಯ | Lingayath/Veerashaiva-Aaradhya |
| 19. | ಲಿಂಗಾಯಿತ/ವೀರಶೈವ–ಗುರುವ/ಗುರವ | Lingayath/Veerashaiva-Guruva/Gurava |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಬ್ಬಯ್ಯ**

ಪಿ.ಆರ್. 490 ಸರ್ಕಾರದ ಅಧೀನ ಕಾರ್ಯದರ್ಶಿ–II, ಸಮಾಜ ಕಲ್ಯಾಣ ಇಲಾಖೆ.

**INFRASTRUCTURE DEVELOPMENT SECRETARIAT**

**Sub:** Release of funds for construction of RuB in lieu of L.C.No.261 between Yalvigi-Kalasa Stations.

**Read:** Letter No.W.352/DCE/PP/LC-261 dated 18.12.2008 from the Deputy Chief Engineer, Construction, SWR, Hubli.

**PREAMBLE**

The Deputy Chief Engineer, Construction, South Western Railway, Hubli, in his letter dated 18.12.08 read at (1) above, has requested to arrange to deposit an amount of Rs.4.90 crore towards construction of Road Under Bridge in lieu of L.C.No.261 b/w Yalvigi-Kalasa Stations as this work falls under deposit work since the TVU count is less than one lakh.

2. Government of Karnataka after examining the proposal of the Deputy Chief Engineer, Construction, SWR, Hubli has decided to release Rs.4.90 crore towards Construction of Road Under Bridge in lieu of L.C.No.261 between Yalvigi-Kalasa Stations as deposit work.

3. Hence this order.

**Government Order No. IDD 46 NSW 2008, Bangalore, Dated 17th January 2009.**

After careful examination of the request of railways, Government is pleased to release an amount of Rs.4.90 crores (Four Crores Ninety Lakhs) for construction of RuB in lieu of L.C.No.261 b/w Yalvigi-Kalasa Stations as Deposit Contribution Work.

1. This amount shall be met out under the Head of Account 5465-01-190-3-04 (P)-211 K-RIDE RoB/RuB investments.

2. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government. Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railways, Bangalore.

3. This order is issued in accordance with the concurrence of Finance Department given vide U.O.Note No.FD 1773 Exp-I/08 dated 5.1.2009.

By Order and in the name of the Governor of Karnataka,

**N. MANJULA GEETHA**

Under Secretary to Government,

Infrastructure Development Department.

P.R. 491

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** 2007–08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (ಭಾ–2), ದಿನಾಂಕ: 12.03.2008.
2. ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳ ದಿನಾಂಕ: 12.09.2008, 18.09.2008, 19.09.2008, 10.10.2008, 13.10.2008, 13.10.2008, 14.10.2008, 15.10.2008, 16.10.2008, 30.08.2008, 18.10.2008, 04.12.2008, 04.12.2008, 25.11.2008, 10.07.2008, 27.08.2008, 04.09.2008 ಮತ್ತು ದಿನಾಂಕ: 08.09.2008.
3. ಸರ್ಕಾರದ ಆದೇಶ ಸಂಖ್ಯೆ:ಸಿಐ 19 ಎಸ್‌ಜಿಎಫ್ 2008,(4) ದಿನಾಂಕ:02.01.2009.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನ ಹಂಗಾಮಿನಲ್ಲಿ ದಿನಾಂಕ: 31.03.2008ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ಎಲ್ಲಾ ಕಬ್ಬನ್ನು ನುರಿಸಬೇಕೆಂಬ ಹಿನ್ನೆಲೆಯಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಕೆಲವು ವಿನಾಯಿತಿ ಮತ್ತು ಸಹಾಯಧನ ಸೌಲಭ್ಯಗಳನ್ನು ನೀಡಲಾಗುವುದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ (2) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳಲ್ಲಿ ರಾಜ್ಯದ 19 ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿಯಲ್ಲಿ ಕಬ್ಬು ನುರಿಸಿದ್ದು, ಮತ್ತು 30 ಕಿ.ಮೀ. ಗೆ ಮೀರಿದ ದೂರದಿಂದ ಕಬ್ಬು ಸಾಗಾಣಿಕೆ ಮಾಡಿಕೊಂಡಿದ್ದು ಹಾಗೂ ಸಕ್ಕರೆಯನ್ನು ರಫ್ತು ಮಾಡಲಾಗಿದ್ದು ಈ ಸಂಬಂಧ ದಿನಾಂಕ: 12.03.2008ರ ಸರ್ಕಾರದ ಆದೇಶದಂತೆ 22,31,17,855/– ರೂಗಳ ಸಹಾಯಧನ 7,25,15,614/–ರೂಗಳ ಸಾಗಾಣಿಕೆ ಸಹಾಯಧನ ಮತ್ತು 15,55,43,700/–ರೂಗಳ ರಫ್ತು ಸಹಾಯಧನ ಸೇರಿ ಒಟ್ಟು 45,11,77,169/–ರೂಗಳನ್ನು ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಹಣ ಬಿಡುಗಡೆಗೆ ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (3)ರಲ್ಲಿರುವ ಆದೇಶದಲ್ಲಿ ರಾಜ್ಯದ 15 ಸಕ್ಕರೆ ಕಾರ್ಖಾನೆಗಳಿಗೆ ದಿನಾಂಕ:01.04.2008 ರಿಂದ ದಿನಾಂಕ:31.07.2008ರವರೆಗೆ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಪ್ರತಿ ಟನ್ ಕಬ್ಬಿಗೆ ರೂ.100/– ರಂತೆ ಸಹಾಯಧನವನ್ನು ಆಯುಕ್ತರು ಶಿಫಾರಸ್ಸು ಮಾಡಲಾದ ಮೊತ್ತದಲ್ಲಿ ಶೇ.50ರಷ್ಟನ್ನು ಮಾತ್ರ ಬಿಡುಗಡೆ ಮಾಡಲಾಗಿದ್ದು, ಈ ಕೆಳಕಂಡ 6 ಸಕ್ಕರೆ ಕಾರ್ಖಾನೆಗಳಿಗೆ ಬಾಕಿ ಉಳಿದ ಶೇ.50 ರಷ್ಟು ಹಣ ಒಟ್ಟು 4,90,05,135/– ರೂಗಳನ್ನು ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

| ಕ್ರ. ಸಂ. | ಕಾರ್ಖಾನೆಯ ಹೆಸರು | ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುವ ಮೊತ್ತ ಪ್ರತಿ ಟನ್ ರೂ.100ರಂತೆ | ದಿನಾಂಕ: 02.01.2009ರ ಆದೇಶದಲ್ಲಿ ಬಿಡುಗಡೆ ಮಾಡಲಾದ ಶೇ. 50 ರಷ್ಟು ಹಣ | ಬಾಕಿ ಉಳಿದ ಶೇ.50 ರಷ್ಟು ಹಣ |
|---|---|---|---|---|
| 1. | ಬೀಳಗಿ ಶುಗರ್ಸ್ (ಲಿ) | 1,42,42,862/– | 71,21,431/– | 71,21,431/– |
| 2. | ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ | 77,97,400/– | 38,98,700/– | 38,98,700/– |
| 3. | ಗೋದಾವರಿ ಶುಗರ್ಸ್ (ಲಿ) | 4,32,18,900/– | 2,16,09,450/– | 2,16,09,450/– |
| 4. | ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 1,41,02,000/– | 70,51,000/– | 70,51,000/– |
| 5. | ಶ್ಯಾಮನೂರು ಶುಗರ್ಸ್ (ಲಿ) | 1,34,55,808/– | 67,27,904/– | 67,27,904/– |
| 6. | ಮಹಾತ್ಮಾಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 51,93,300/– | 25,96,650/– | 25,96,650/– |
| | **ಒಟ್ಟು** | | | **4,90,05,135/–** |

**ಸರ್ಕಾರದ ಆದೇಶ ಸಂಖ್ಯೆ:ಸಿಐ 19 ಎಸ್‌ಜಿಎಫ್ 2008 (5), ಬೆಂಗಳೂರು, ದಿನಾಂಕ: 19ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2007–08ನೇ ಸಾಲಿನಲ್ಲಿ ರಾಜ್ಯದ ಈ ಕೆಳಕಂಡ 6 ಸಕ್ಕರೆ ಕಾರ್ಖಾನೆಗಳಿಗೆ ವಿಸ್ತರಿಸಿದ ಅವಧಿ ದಿನಾಂಕ:01.04.2008 ರಿಂದ 31.07.2008ರವರೆಗೆ ನುರಿಸಿದ ಕಬ್ಬಿಗೆ ಬಾಕಿ ಉಳಿದ ಶೇ.50ರಷ್ಟು ಹಣ 4,90,05,135/– (ನಾಲ್ಕು ಕೋಟಿ, ತೊಂಬತ್ತು ಲಕ್ಷ, ಐದು ಸಾವಿರದ, ನೂರ ಮೂವತ್ತೈದು ರೂಗಳು ಮಾತ್ರ) ರೂಗಳ ಸಹಾಯಧನವನ್ನು ಈ ಕೆಳಕಂಡ ಕಾರ್ಖಾನೆಗಳಿಗೆ ನೀಡುವ ಸಲುವಾಗಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| ಕ್ರ. ಸಂ. | ಕಾರ್ಖಾನೆಯ ಹೆಸರು | ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುವ ಮೊತ್ತ ಪ್ರತಿ ಟನ್ ಗೆ ರೂ.100ರಂತೆ | ದಿನಾಂಕ: 02.01.2009ರ ಆದೇಶದಲ್ಲಿ ಬಿಡುಗಡೆ ಮಾಡಲಾದ ಶೇ. 50 ರಷ್ಟು ಹಣ | ಬಿಡುಗಡೆ ಮಾಡಲಾದ ಬಾಕಿ ಉಳಿದ ಶೇ.50 ರಷ್ಟು ಹಣ | ಸಂಬಂಧಿಸಿದ ಜಿಲ್ಲಾಧಿಕಾರಿ |
|---|---|---|---|---|---|
| 1. | ಬೀಳಗಿ ಶುಗರ್ಸ್ (ಲಿ) | 1,42,42,862/– | 71,21,431/– | 71,21,431/– | ಬಾಗಲಕೋಟೆ |
| 2. | ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ, [ಶ್ರೀ ಚಾಮುಂಡೇಶ್ವರಿ ಶುಗರ್ಸ್ (ಲಿ)ರವರು ಗುತ್ತಿಗೆಗೆ ಪಡೆದಿದ್ದಾರೆ.] | 77,97,400/– | 38,98,700/– | 38,98,700/– | ಹಾಸನ |
| 3. | ಗೋದಾವರಿ ಶುಗರ್ಸ್ (ಲಿ) | 4,32,18,900/– | 2,16,09,450/– | 2,16,09,450/– | ಬಾಗಲಕೋಟೆ |

| ಕ್ರ. ಸಂ. | ಕಾರ್ಖಾನೆಯ ಹೆಸರು | ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುವ ಮೊತ್ತ ಪ್ರತಿ ಟನ್ ಗೆ ರೂ.100ರಂತೆ | ದಿನಾಂಕ: 02.01.2009ರ ಆದೇಶದಲ್ಲಿ ಬಿಡುಗಡೆ ಮಾಡಲಾದ ಶೇ. 50 ರಷ್ಟು ಹಣ | ಬಿಡುಗಡೆ ಮಾಡಲಾದ ಬಾಕಿ ಉಳಿದ ಶೇ.50 ರಷ್ಟು ಹಣ | ಸಂಬಂಧಿಸಿದ ಜಿಲ್ಲಾಧಿಕಾರಿ |
|---|---|---|---|---|---|
| 4. | ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 1,41,02,000/– | 70,51,000/– | 70,51,000/– | ಬೆಳಗಾಂ |
| 5. | ಶ್ಯಾಮನೂರು ಶುಗರ್ಸ್ (ಲಿ) | 1,34,55,808/– | 67,27,904/– | 67,27,904/– | ದಾವಣಗೆರೆ |
| 6. | ಮಹಾತ್ಮಾಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) | 51,93,300/– | 25,96,650/– | 25,96,650/– | ಬೀದರ್ |
| | **ಒಟ್ಟು** | | | **4,90,05,135** | |

2008–09ನೇ ಸಾಲಿನ ಪರಿಷ್ಕೃತ ಆಯವ್ಯಯದಲ್ಲಿ ಈ ಉದ್ದೇಶಕ್ಕಾಗಿ ಲೆಕ್ಕ ಶೀರ್ಷಿಕೆ 2852–08–201–0–07 (ಯೋಜನೆ) 106 ಸಹಾಯಧನ ಇದರಡಿಯಲ್ಲಿ ಒದಗಿಸಲಾದ 50.00 ಕೋಟಿ ರೂಗಳಲ್ಲಿ ಸದರಿ ಹಣವನ್ನು ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ:12.03.2008ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಮೂಲಕ ಸಂಬಂಧಿಸಿದ ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಕ್ರಮ ವಹಿಸತಕ್ಕದ್ದು. ಕಾರ್ಖಾನೆಗಳು ರೈತರಿಗೆ ಕಬ್ಬು ಖರೀದಿ ಬಾಕಿ ಉಳಿಸಿಕೊಂಡಿದ್ದಲ್ಲಿ, ರೈತರಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದ್ದು, ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 68 ವೆಚ್ಚ–1/2008, ದಿನಾಂಕ:17.01.2009 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 492

**ಪಿ. ಆನಂದ್‌ಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಬೆಂಗಳೂರು (ದಕ್ಷಿಣ) ಕಂದಾಯ ತಾಲ್ಲೂಕಿನಲ್ಲಿ ಹೊಸದಾಗಿ ಸೃಜಿಸಿರುವ ನೋಟರಿ ಹುದ್ದೆಗೆ – ಶ್ರೀಮತಿ ಶಶಿರೇಖ ಎಂ ಶೆಟ್ಟಿ, ಇವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಲಾ 158 ಎಲ್‌ಸಿಎಲ್ 06, ದಿನಾಂಕ: 11.05.2007.
2. ಸರ್ಕಾರಿ ಪತ್ರ ಸಂಖ್ಯೆ:ಲಾ 158 ಎಲ್‌ಸಿಎಲ್ 06, ದಿನಾಂಕ: 07.06.2007.
3. ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ನಗರ ಇವರ ಪತ್ರ ಸಂಖ್ಯೆ ಎಡಿಎಂ.1(ಬಿ) 144:2008 ದಿನಾಂಕ: 08.07.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 11.05.2007ರ ಸರ್ಕಾರಿ ಆದೇಶದಲ್ಲಿ ಬೆಂಗಳೂರು (ದಕ್ಷಿಣ) ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ: 07.06.2007ರ ಪತ್ರದಲ್ಲಿ ಸದರಿ ಹುದ್ದೆಯ ನೇಮಕಾತಿಗೆ ನೋಟರಿಗಳ ಅಧಿನಿಯಮ / ನಿಯಮಗಳನ್ವಯ ಪ್ರಸ್ತಾವನೆ ಸಲ್ಲಿಸುವಂತೆ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ನಗರ ಇವರನ್ನು ಕೋರಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ದಿನಾಂಕ: 08.07.2008ರ ಪತ್ರದಲ್ಲಿ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ನಗರ ಇವರು 10 ಜನರ ಮನವಿಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 158 ಎಲ್‌ಸಿಎಲ್ 2006, ಬೆಂಗಳೂರು, ದಿನಾಂಕ: 16ನೇ ಜನವರಿ 2009**

ನೋಟರಿ ನಿಯಮಗಳು (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀಮತಿ ಶಶಿರೇಖಾ ಎಂ. ಶೆಟ್ಟಿ, ವಕೀಲರು, ನಂ.318, 2ನೇ 'ಇ' ಕ್ರಾಸ್, 15ನೇ ಮೈನ್, ಯುವಿಸಿಇ ಲೇಔಟ್, 1ನೇ ಬ್ಲಾಕ್, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು–79 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬೆಂಗಳೂರು (ದಕ್ಷಿಣ) ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು, ನಿಯಮಾನುಸಾರ ನಿಗದಿಪಡಿಸಲಾದ ರೂ.1000/– (ರೂಪಾಯಿ ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಲೆಕ್ಕ ಶೀರ್ಷಿಕೆ 0070–ಇತರೆ–ಆಡಳಿತಾತ್ಮಕ–ಸೇವೆಗಳು–01–ನ್ಯಾಯ ಪರಿಪಾಲನೆ – 501–0–ಇತರೆ ಸ್ವೀಕೃತಿಗಳು–06–ಇತರೆ ಬಾಬುಗಳಿಗೆ (0070–01–501–0–06) ಜಮಾ ಮಾಡಿ, ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ವೃತ್ತಿ ಪ್ರಮಾಣ ಪತ್ರವನ್ನು ನೀಡಲಾಗುವುದು. ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ 1952ರನ್ವಯ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು. ಈ ಸಂಬಂಧದ ವೆಚ್ಚವನ್ನು ವಕೀಲರೆ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಪಿ.ಆರ್. 493

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಶ್ರೀ ಎಸ್.ಬಿ. ಹಿರೇಗೌಡರ್, ನೋಟರಿ, ಬೆಂಗಳೂರು ನಗರ ಇವರ ಕರ್ತವ್ಯ ನಿರ್ವಹಣೆ – ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆಯುವ ಬಗ್ಗೆ.

**ಓದಲಾಗಿದೆ:**

1. ಪತ್ರ ಸಂಖ್ಯೆ:
   ಎಡಿಎಂ–1(ಬಿ) 15/2005 ದಿನಾಂಕ: 19.01.2005.
   ಎಡಿಎಂ–1(ಬಿ) 12/2005 ದಿನಾಂಕ: 25.01.2006.
   ಎಡಿಎಂ–1(ಬಿ) 16/2007 ದಿನಾಂಕ: 20.01.007.
   ಎಡಿಎಂ–1(ಬಿ) 122/2008 ದಿನಾಂಕ: 31.05.2008.
   ವಿಲೇಖನಾಧಿಕಾರಿಗಳು, ನಗರ ಸಿವಿಲ್ ನ್ಯಾಯಾಲಯ, ಬೆಂಗಳೂರು ಇವರಿಂದ
2. ಸರ್ಕಾರದ ಪತ್ರ ಸಂಖ್ಯೆ ಲಾ 72 ಎಲ್‌ಸಿಎಲ್ 2008 ದಿನಾಂಕ: 16.07.2008 ಮತ್ತು 16.08.2008.
3. ಕಾರಣ ಕೇಳುವ ನೋಟೀಸ್ ಸಂಖ್ಯೆ ಲಾ 72 ಎಲ್‌ಸಿಎಲ್ 2008 ದಿನಾಂಕ: 15.11.2008.

**ಪ್ರಸ್ತಾವನೆ:**

ಶ್ರೀ ಎಸ್.ಬಿ. ಹಿರೇಗೌಡರ್, ನೋಟರಿ, ಬೆಂಗಳೂರು ನಗರ ರವರು 2004, 2005, ಮತ್ತು 2006ನೇ ಸಾಲುಗಳಲ್ಲಿ ಆರೋಗ್ಯ ಸರಿಯಿಲ್ಲದಿರುವುದರಿಂದ ನೋಟರಿ ರಿಜಿಸ್ಟರ್, ಸ್ವೀಕೃತಿ ಪುಸ್ತಕಗಳನ್ನು ನಿರ್ವಹಿಸಿರುವುದಿಲ್ಲವೆಂದು 'ಶೂನ್ಯ' ವರದಿಯನ್ನು ಸಲ್ಲಿಸಿರುವುದಾಗಿ, ಹಾಗೂ 2007ನೇ ಸಾಲಿನ ನೋಟರಿ ರಿಜಿಸ್ಟರ್ ರಸೀದಿ ಪುಸ್ತಕ ಮತ್ತು ವಾರ್ಷಿಕ ವರದಿಯನ್ನು ತಪಾಸಣೆಗೆ ಇದುವರೆವಿಗೂ ಒಳಪಡಿಸಿರುವುದಿಲ್ಲ. ಅವುಗಳನ್ನು ಸಲ್ಲಿಸಲು ದಿನಾಂಕ: 12.03.2008ರಂದು ನಾಜರ್ ಮೂಲಕ ಶ್ರೀಯುತರಿಗೆ ನೋಟೀಸ್ ಕಳುಹಿಸಿದ್ದು ವಿಳಾಸವಿಲ್ಲವೆಂದು ವಾಪಸ್ಸು ಬಂದಿದೆ ಎಂದು ರಿಜಿಸ್ಟ್ರಾರ್ ಜನರಲ್, ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ರವರು ಕ್ರಮವಾಗಿ ಮೇಲೆ (1)ರಲ್ಲಿ ಓದಲಾದ ಪತ್ರಗಳಲ್ಲಿ ತಿಳಿಸಿದ್ದರು.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಪತ್ರ ದಿನಾಂಕ:16.07.2008ರಲ್ಲಿ 2004ನೇ ಸಾಲಿನಿಂದ ಶೂನ್ಯ ವರದಿ ಸಲ್ಲಿಸುತ್ತಾ ಬಂದಿದ್ದು, ನೋಟರಿ ಪ್ರಮಾಣ ಪತ್ರದ ಅವಧಿ ಮುಕ್ತಾಯಗೊಂಡಿದ್ದರೂ ನಂತರದ ಅವಧಿಗೆ ವೃತ್ತಿ ಪ್ರಮಾಣ ಪತ್ರ ನವೀಕರಿಸಿಕೊಂಡಿಲ್ಲ ಮತ್ತು ನೋಟರಿ ಹುದ್ದೆ ಬಿಟ್ಟು ಕೊಡುವ ಬಗ್ಗೆ ರಾಜೀನಾಮೆಯನ್ನು ಸಲ್ಲಿಸಿಲ್ಲ.

ಆದ್ದರಿಂದ, ಅನಾರೋಗ್ಯದ ನಿಮಿತ್ತ ನೋಟರಿ ಕರ್ತವ್ಯ ನಿರ್ವಹಿಸದೆ ಇರುವುದು, ಪ್ರಮಾಣ ಪತ್ರ ನವೀಕರಿಸಿಕೊಳ್ಳದೆ ಇರುವುದು ನೋಟರಿ ಅಧಿನಿಯಮ/ನಿಯಮಗಳನ್ನು ಉಲ್ಲಂಘಿಸಿದಂತಾಗುವುದರಿಂದ ಈ ಬಗ್ಗೆ ಲಿಖಿತ ಉತ್ತರವನ್ನು 15 ದಿನಗಳೊಳಗಾಗಿ ಸಲ್ಲಿಸಲು ನೋಟರಿಯವರಿಗೆ ತಿಳಿಸಲಾಗಿತ್ತು. ಮತ್ತು ದಿನಾಂಕ 16.08.2008ರಂದು ಜ್ಞಾಪಿಸಲಾಗಿತ್ತು. ಅದನ್ನು ನಾಜರ್ ಮೂಲಕ ಶ್ರೀಯುತರಿಗೆ ಕಳುಹಿಸಲು ರಿಜಿಸ್ಟ್ರಾರ್, ಸಿಟಿ ಸಿವಿಲ್ ನ್ಯಾಯಾಲಯರವರನ್ನು ಸಹಾ ಕೋರಲಾಗಿತ್ತು. ಸದರಿ

ಪತ್ರವನ್ನು ದಿನಾಂಕ: 20.08.2008 ರಂದು ನೋಟರಿಯವರು ಸ್ವೀಕರಿಸಿದ್ದು, ಸಾಕಷ್ಟು ಕಾಲಾವಕಾಶ ನೀಡಿದ್ದರೂ ಯಾವುದೇ ಉತ್ತರ ಬಾರದಿರುವುದರಿಂದ ಮೇಲೆ (3)ರಲ್ಲಿ ಓದಲಾದ ದಿನಾಂಕ: 15.11.2008 ರಂದು ಕಾರಣ ಕೇಳುವ ನೋಟೀಸ್ ಸಹಾ ಜಾರಿ ಮಾಡಲಾಗಿತ್ತು. ಸದರಿ ಕಾರಣ ಕೇಳುವ ನೋಟೀಸನ್ನು ನೋಟರಿಯವರು ದಿನಾಂಕ: 21.11.2008ರಂದು ಸ್ವೀಕರಿಸಿದ್ದಾಗ್ಯೂ ಯಾವುದೇ ಲಿಖಿತ ಉತ್ತರವನ್ನು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಗಾಗಲೀ ಸರ್ಕಾರಕ್ಕಾಗಲಿ ಸಲ್ಲಿಸದಿರುವುದನ್ನು, ನಾಲ್ಕು ವರ್ಷಗಳಿಂದ ಅನಾರೋಗ್ಯದ ನಿಮಿತ್ತ ನೋಟರಿ ಕರ್ತವ್ಯ ನಿರ್ವಹಿಸಿಲ್ಲದಿರುವುದನ್ನು, ನೋಟರಿ ಪ್ರಮಾಣ ಪತ್ರದ ಅವಧಿ ಮುಕ್ತಾಯಗೊಂಡಿದ್ದರೂ ನವೀಕರಣಕ್ಕೆ ಮನವಿ ಸಲ್ಲಿಸದಿರುವುದು ಸಾಕಷ್ಟು ಅವಕಾಶ ನೀಡಿದ್ದರೂ ಉತ್ತರ ನೀಡದಿರುವುದು ಸ್ಪಷ್ಟವಾಗಿದೆ. ಇದರಿಂದ ಸಾರ್ವಜನಿಕರು ನೋಟರಿ ಸೇವೆ/ಸೌಲಭ್ಯಗಳಿಂದ ವಂಚಿತರಾಗಿರುವುದನ್ನು ಗಂಭೀರವಾಗಿ ಪರಿಗಣಿಸಿ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 72 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ: 12ನೇ ಜನವರಿ 2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಗಣಿಸಿ ಶ್ರೀ ಎಸ್.ಬಿ. ಹಿರೇಗೌಡರ್, ನೋಟರಿ, ಬೆಂಗಳೂರು ಇವರ ಹೆಸರನ್ನು ನೋಟರಿ ಕಾಯ್ದೆ 1952ರ ಕಲಂ 10(ಬಿ)(ಸಿ) ಮತ್ತು ನೋಟರಿ ನಿಯಮಾವಳಿಗಳು, 1956ರ ನಿಯಮ 13(12)(ಬಿ)(1) ರೀತ್ಯ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲಾ ಹೆಚ್.ಆರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 494

## HORTICULTURE SECRETARIAT

**Sub:** Central Sector Scheme – National project on Organic Farming–reg.

**Read:**
1. GOI letter No.2-7/2007-Org.Fmg dated 20.02.2008.
2. GOI letter No.2-3/2008-Organic Farming dated 5.6.2008.
3. Letter of Director of Horticulture No. ತೋಇ/ಯೋ/ಸತೋಅ–1/15/2008-09 dated 15.7.2008.

**PREAMBLE:**

Government of India has sanctioned National project on Organic Farming for implementation of various components in Karnataka during 2007-08 at a total cost of Rs.257.10 lakhs and has released an amount of Rs.177.10 lakhs as the 1st instalment vide Government of India letter read at (1) above. Further, Government of India has conveyed its approval for revalidation of the unspent balance released to State Government under Central Sector Scheme National project on Organic Faming vide its letter read at (2) above.

The Director of Horticulture has informed that the said project is 100% assistance from Government of India and has requested to provide funds during 2008-09 under a new Head of Account vide his letter read at (3) above.

The proposal of Director of Horticulture has been examined and it is orderd as below;

**Government Order No. AHD 112 HPP 2008, Bangalore, Dated: 27th January 2009**

Government is pleased to release an amount of Rs.177.10 lakhs (Rupees One Hundred and Seventy Seven lakhs and Ten Thousand only) to the Director of Horticulture for implementation of National project on Organic Farming in Karnataka State during 2008-09.

The said amount will be released from the Contingency Fund under the Head of Account 8000-00-251-0-00 (Crop Husbandry) and it will be recouped under Head of Account 2401-00-108-2-40 (plan) by Supplementary Estimates. Finance Department will release the said amount from Contingency Fund through a separate Order. Amount cannot to drawn without a separate Order from Finance Department. The Drawing Officer shall enclose the Order to be issued by Finance Department to this Order while

presenting the Bill to the Treasury for drawing funds from the Contingency Fund. Only then the Treasury shall take action to honour the Bill.

The Director of Horticulture shall adhere to the terms and conditions stipulated in the Government of India letter read at (1) and (2) above, while incurring expenditure.

This Order issues with the concurrence of Finance Department Note No. ಆಇ 321 ವೆಚ್ಚ–4 2008 dated 2.1.2009.

By Order and in the name of the Governor of Karnataka,

**S. RAJU**

P.R. 499

Under Secretary to Government,

Horticulture Department.

**ಒಳಾಡಳಿತ ಸಚಿವಾಲಯ**

**ವಿಷಯ:** ಉತ್ತರ ಕನ್ನಡ ಜಿಲ್ಲೆ ಕುಮಟಾದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ವಸತಿ ಗೃಹ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಆದೇಶ ನಂ.ಎಲ್ಎನ್‌ಡಿ / 1 / ಡಿಎಸ್‌ಆರ್ / 636 / 87–88, ದಿನಾಂಕ 29.12.1987.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂ:ಡಿಪಿಎನ್ / ವಸತಿ / 1210 / 95–96, ದಿನಾಂಕ:28.03.2007 ಮತ್ತು 09.01.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ 29.12.1987ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರು ಉತ್ತರ ಕನ್ನಡ ಜಿಲ್ಲೆ ಕುಮಟಾ ಗ್ರಾಮದ ಸರ್ವೆ ನಂ. 465 ಪ್ಲಾಟ್ ನಂ: 89(2)ರ ಕ್ಷೇತ್ರದ ಪ್ಲಾಟ್ ನಂ.6ರಲ್ಲಿ 0–3–12 ಕ್ಷೇತ್ರ ಮತ್ತು ಪ್ಲಾಟ್ 7ರಲ್ಲಿ 0–3–0ಕ್ಷೇತ್ರದ ಜಮೀನನ್ನು ಅಭಿಯೋಜನಾ ಇಲಾಖೆಗೆ ಮಂಜೂರು ಮಾಡಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ 28.03.2007 ಮತ್ತು 09.01.2009ರ ಪತ್ರಗಳಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಉತ್ತರ ಕನ್ನಡ ಜಿಲ್ಲೆ ಕುಮಟಾದಲ್ಲಿ ಉತ್ತರ ಕನ್ನಡ ಜಿಲ್ಲೆ ಜಿಲ್ಲಾಧಿಕಾರಿಗಳು ಮಂಜೂರು ಮಾಡಿರುವ ಸ್ಥಳದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ವಸತಿ ಗೃಹ ಕಟ್ಟಡವನ್ನು ನಿರ್ಮಾಣ ಮಾಡುವ ಕಾಮಗಾರಿಗೆ ಸಹಾಯಕ ಕಾರ್ಯಪಾಲಕ ಅಭಿಯಂತರರು, ನಂ.5, ಲೋಕೋಪಯೋಗಿ ಉಪವಿಭಾಗ, ಕುಮಟಾ, ಉತ್ತರ ಕನ್ನಡ ಜಿಲ್ಲೆ ಇವರು ತಯಾರಿಸಿರುವ ಅಂದಾಜು ಪಟ್ಟಿಯನ್ನು ಸಲ್ಲಿಸುತ್ತಾ, ಮಂಜೂರಾದ ಅಂದಾಜು ಮೊತ್ತ ರೂ.06.00 ಲಕ್ಷಗಳಲ್ಲಿ ರೂ.3.00 ಲಕ್ಷಗಳ ಅನುದಾನವನ್ನು 2008–09ನೇ ಸಾಲಿನ ಅಪೆಂಡಿಕ್ಸ್–`ಇ` ನಲ್ಲಿ ಒದಗಿಸಿರುವುದರಿಂದ, ಲೋಕೋಪಯೋಗಿ ಇಲಾಖೆಯ ಅಭಿಯಂತರರು ಸಲ್ಲಿಸಿರುವ ರೂ.06.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 166 ಪಿಪಿಇ 2007, ಬೆಂಗಳೂರು, ದಿನಾಂಕ 3ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಉತ್ತರ ಕನ್ನಡ ಜಿಲ್ಲೆ ಕುಮಟಾ ಗ್ರಾಮದ ಸರ್ವೆ 465ಅ, ಪ್ಲಾಟ್ ನಂ: 89(2)ರ ಕ್ಷೇತ್ರದ ಪ್ಲಾಟ್ ನಂ.6ರಲ್ಲಿ 0–3–12 ಕ್ಷೇತ್ರ ಮತ್ತು ಪ್ಲಾಟ್ 7ರಲ್ಲಿ 0–3–0ಕ್ಷೇತ್ರದ ಜಮೀನಿನಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ವಸತಿ ಗೃಹವನ್ನು ನಿರ್ಮಾಣದ ಕಾಮಗಾರಿಗಾಗಿ 2008–09ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್–`ಇ` ನಲ್ಲಿ ರೂ.2.00 (ಎರಡು ಲಕ್ಷ ರೂಪಾಯಿಗಳು) ಲಕ್ಷಗಳ ಅನುದಾನವನ್ನು ಸೇರ್ಪಡೆ ಮಾಡಿದ್ದು, ಸದರಿ ಕಾಮಗಾರಿಯ ಕೆಲಸವನ್ನು ಪ್ರಾರಂಭಿಸಲು ಮತ್ತು ಸಹಾಯಕ ಕಾರ್ಯಪಾಲಕ ಅಭಿಯಂತರರು, ನಂ.5, ಲೋಕೋಪಯೋಗಿ ಉಪವಿಭಾಗ, ಕುಮಟಾ, ಉತ್ತರ ಕನ್ನಡ ಜಿಲ್ಲೆ ಇವರು ತಯಾರಿಸಿರುವ ರೂ.06.00 (ಆರು ಲಕ್ಷ ರೂಪಾಯಿಗಳು) ಲಕ್ಷಗಳ ಅಂದಾಜು ಪಟ್ಟಿಗೆ ಸರ್ಕಾರವು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಒಸಾಇ 7693 ಆಂಆಸ 2009 ದಿನಾಂಕ: 07.02.2009ರ ಸಹಮತಿ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಆಇ 1 ಟಿಎಫ್‌ಪಿ 1996, ದಿನಾಂಕ:10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 773

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ ಮತ್ತು ಸು, ಕಾಫಿಪೋಸಾ ಮತ್ತು ಅಭಿಯೋಗಗಳು)

**ಸಹಕಾರ ಸಚಿವಾಲಯ**

**ವಿಷಯ:** ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ವಿಭಜಿಸಿ ಉಡುಪಿಯಲ್ಲಿ ಹೊಸ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ., ಇದರ ಕಾರ್ಯದರ್ಶಿಯವರ ಪತ್ರಸಂಖ್ಯೆ: ಕಾ/ ಯೋ ಮತ್ತು ಅ/7814/ 08–09 ದಿನಾಂಕ; 20.10.2008.
2. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರ ಪತ್ರಸಂಖ್ಯೆ: ಎಇ/ ಎ2–73/2008–09 ದಿನಾಂಕ: 08.12.2008.
3. ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ: ಸಿಆರ್‌ಡಿ/ 44/ಕೆಎಂಸಿ–1/2008–09 ದಿನಾಂಕ: 09.01.2009.
4. ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ: ಸಿಆರ್‌ಡಿ/44/ಕೆಎಂಸಿ–1/2008–09 ದಿನಾಂಕ: 13.01.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಅಪೆಕ್ಸ್ ಬ್ಯಾಂಕಿನ ಕಾರ್ಯದರ್ಶಿಯವರು ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ವಿಭಜಿಸಿ ಉಡುಪಿಯಲ್ಲಿ ಹೊಸ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಮತ್ತು ಅದೇ ರೀತಿಯಲ್ಲಿ ಏಳು ಹೊಸ ಜಿಲ್ಲೆಗಳಲ್ಲಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳನ್ನು ಸ್ಥಾಪಿಸುವ ಕುರಿತು 1998 ರಲ್ಲಿ ಬ್ಯಾಂಕಿಂಗ್ ಪರಿಣತರಾದ ಶ್ರೀ ಆರ್. ಸುಂದರವರದನ್ ಇವರನ್ನು ಹೊಸ ಬ್ಯಾಂಕುಗಳ ಆರ್ಥಿಕ ಸ್ಥಿತಿಗತಿಯ ಬಗ್ಗೆ ಅಧ್ಯಯನ ಮಾಡಲು ನೇಮಿಸಿದ್ದು, ಸದರಿಯವರು ದಿನಾಂಕ: 23.02.1999 ರಂದು ಸಲ್ಲಿಸಿದ ವರದಿಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ವಿಭಜಿಸಿ ಉಡುಪಿಯಲ್ಲಿ ಹೊಸ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಸ್ಥಾಪಿಸಲು ಆರ್ಥಿಕ ಸಾಧ್ಯತೆಯಿರುವ ಬಗ್ಗೆ ವರದಿ ಮಾಡಿರುತ್ತಾರೆಂದು ತಿಳಿಸಿದ್ದಾರೆ. ಮೇಲೆ ಓದಲಾದ (2)ರ ಪತ್ರದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ದಿನಾಂಕ: 01.12.2008 ರಂದು ನಡೆಸಿದ ಬ್ಯಾಂಕಿನ ವಿಶೇಷ ಮಹಾಸಭೆಯ ನಡವಳಿಗಳನ್ನು ಕಳುಹಿಸಿದ್ದಾರೆ. ಮೇಲೆ ಓದಲಾದ (3)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ನಬಾರ್ಡಿಗೆ ಪತ್ರ ಬರೆದು ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ವಿಭಜಿಸಿ ಉಡುಪಿಯಲ್ಲಿ ಹೊಸ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಸ್ಥಾಪಿಸಲು ಭಾರತೀಯ ರಿಸರ್ವ್ ಬ್ಯಾಂಕಿನ ಅನುಮೋದನೆ ಪಡೆಯುವಂತೆ ವಿನಂತಿಸಿದ್ದಾರೆ. ಮೇಲೆ ಓದಲಾದ (4)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಉಡುಪಿ ಜಿಲ್ಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಹೊಸ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಪ್ರಾರಂಭಿಸುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30ಬಿ ಅಡಿಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಆಡಳಿತ ಸಮಿತಿಗೆ ನಿರ್ದೇಶನ ನೀಡುವಂತೆ ಕೋರಿದ್ದಾರೆ.

ಕರ್ನಾಟಕ ರಾಜ್ಯದಲ್ಲಿ ಅಭಿವೃದ್ಧಿಯ ಹಾಗೂ ಪರಿಣಾಮಕಾರಿ ಆಡಳಿತದ ಹಿತದೃಷ್ಟಿಯಿಂದ 1997 ರಲ್ಲಿ ಏಳು ಹೊಸ ಜಿಲ್ಲೆಗಳನ್ನು ಹಾಗೂ 2007 ರಲ್ಲಿ 2 ಹೊಸ ಜಿಲ್ಲೆಗಳನ್ನು ರಚಿಸಲಾಗಿರುತ್ತದೆ. ಇದಕ್ಕೆ ಪೂರಕವಾಗಿ ಹೊಸ ಜಿಲ್ಲೆಗಳಲ್ಲಿ ಪ್ರತ್ಯೇಕವಾಗಿ ಜಿಲ್ಲಾ ಪಂಚಾಯಿತಿಗಳನ್ನೂ ಹಾಗೂ ವಿವಿಧ ಇಲಾಖೆಗಳ ಜಿಲ್ಲಾ ಅಧಿಕಾರಿಗಳ ಕಛೇರಿಗಳನ್ನೂ ಕೂಡ ತೆರೆಯಲಾಗಿದೆ. ಈ ಹಿನ್ನೆಲೆಯಲ್ಲಿ ಹೊಸದಾಗಿ ಅಸ್ತಿತ್ವಕ್ಕೆ ಬಂದಿರುವ ಉಡುಪಿ ಜಿಲ್ಲೆಯಲ್ಲಿ ಪ್ರತ್ಯೇಕ ಜಿಲ್ಲಾ ಪಂಚಾಯಿತಿ ಹಾಗೂ ವಿವಿಧ ಇಲಾಖೆಗಳ ಜಿಲ್ಲಾ ಕಛೇರಿಗಳನ್ನು ಪ್ರಾರಂಭಿಸಿದ್ದು ಅವು ಕಾರ್ಯನಿರ್ವಹಿಸುತ್ತಿವೆ. ಇದಲ್ಲದೇ ರಾಜ್ಯದಲ್ಲಿ ಹೊಸದಾಗಿ ಅಸ್ತಿತ್ವಕ್ಕೆ ಬಂದಿರುವ ಉಡುಪಿ ಹಾಗೂ ಇತರೆ ಜಿಲ್ಲಾ ಕೇಂದ್ರ ಸ್ಥಳಗಳಲ್ಲಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳನ್ನು ಹೊಸದಾಗಿ ಸ್ಥಾಪಿಸುವ ಸಾಧ್ಯತೆಯನ್ನು ಅಧ್ಯಯನ ನಡೆಸಿ ಸಾಧ್ಯತಾ ವರದಿಯನ್ನು ಸಲ್ಲಿಸುವ ಸಲುವಾಗಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕು 1998 ರಲ್ಲಿ ಬ್ಯಾಂಕಿಂಗ್ ಪರಿಣತರಾದ ಶ್ರೀ ಆರ್. ಸುಂದರವರದನ್ ಅಧ್ಯಕ್ಷತೆಯಲ್ಲಿ ರಚಿಸಿದ ಸಮಿತಿಯು

ಉಡುಪಿ ಜಿಲ್ಲೆಯಲ್ಲಿ ಪ್ರತ್ಯೇಕ ಜಿಲ್ಲಾ ಕೇಂದ್ರ ಸಹಕಾರ ಬಾಂಕನ್ನು ಸ್ಥಾಪಿಸಿದಲ್ಲಿ ಅದು ಆರ್ಥಿಕ ಸದೃಢತೆಯಿಂದ ನಡೆಯುವ ಸಾಧ್ಯತೆಯನ್ನು ಹೊಂದಿರುವುದಾಗಿ ಅಭಿಪ್ರಾಯ ವ್ಯಕ್ತಪಡಿಸಿದೆ.

ಯಾವುದೇ ಡಿಸಿಸಿ ಬ್ಯಾಂಕನ್ನು ವಿಭಜಿಸಿ ಹೊಸ ಡಿಸಿಸಿ ಬ್ಯಾಂಕನ್ನು ಸ್ಥಾಪನೆ ಮಾಡಬೇಕಾದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 14ರ ಅಡಿ ಮಹಾಸಭೆಯು 2/3ನೇ ಬಹುಮತದ ನಿರ್ಣಯದ ಮೂಲಕ ಸದರಿ ವಿಭಜನೆಗೆ ಅಂಗೀಕಾರ ನೀಡಬೇಕಾಗಿರುತ್ತದೆ. ಹಾಗೂ ಬ್ಯಾಂಕಿಂಗ್ ಪರಿಣತಿ ಹೊಂದಿದವರಿಂದ ಆರ್ಥಿಕ ಸಾಧ್ಯತಾ ವರದಿಯನ್ನು (economic feasibility study report) ಪಡೆದು ಲಗತ್ತಿಸಿ ಪ್ರಸ್ತಾವೆಯನ್ನು ನಬಾರ್ಡ್ ಮೂಲಕ ಆರ್.ಬಿ.ಐ.ಗೆ ಸಲ್ಲಿಸಬೇಕಾಗಿರುತ್ತದೆ.

ಉಡುಪಿ ಜಿಲ್ಲೆಯು ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ಮಂಗಳೂರು, ಇದರ ಕಾರ್ಯವ್ಯಾಪ್ತಿಗೆ ಸೇರಿರುತ್ತದೆ. ಈ ಬ್ಯಾಂಕನ್ನು ವಿಭಜಿಸಿ ಉಡುಪಿ ಜಿಲ್ಲೆಯಲ್ಲಿ ನೂತನ ಡಿಸಿಸಿ ಬ್ಯಾಂಕನ್ನು ಸ್ಥಾಪಿಸುವ ಪ್ರಸ್ತಾವವನ್ನು ಸದರಿ ಬ್ಯಾಂಕಿನ ದಿನಾಂಕ: 22.08.1999 ಹಾಗೂ ದಿನಾಂಕ: 25.09.2004 ರಂದು ನಡೆದ ಮಹಾಸಭೆಯಲ್ಲಿ ಮಂಡನೆಯಾಗಿ ವಿಭಜನೆಗೆ ಸಮ್ಮತಿ ದೊರೆತಿರುವುದಿಲ್ಲ.

ಪುನಃ ದಿನಾಂಕ: 01.12.2008 ರಂದು ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವಿಶೇಷ ಮಹಾಸಭೆಯನ್ನು ಜರುಗಿಸಲಾಗಿದ್ದು, ವಿಶೇಷ ಮಹಾಸಭೆಯಲ್ಲಿ ಹಾಜರಾದ 574 ಸದಸ್ಯರ ಪೈಕಿ ಉಡುಪಿ ಜಿಲ್ಲೆಗೆ ಪ್ರತ್ಯೇಕ ಸಹಕಾರ ಬ್ಯಾಂಕು ಬೇಕು ಎಂದು 162 ಮತಗಳು ಚಲಾಯಿಸಲಾಗಿದ್ದು, ಉಡುಪಿ ಜಿಲ್ಲೆಗೆ ಪ್ರತ್ಯೇಕ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು ಬೇಡ ಎಂಬುದಾಗಿ 412 ಮತಗಳು ಚಲಾಯಿಸಲಾಗಿದೆಯೆಂದು ಹೇಳಲಾಗಿರುತ್ತದೆ. ದಿನಾಂಕ: 01.12.2008ರ ಮಹಾಸಭೆಯ ನಡವಳಿಯನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಉಡುಪಿಯಲ್ಲಿ ಪ್ರತ್ಯೇಕ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಸ್ಥಾಪಿಸುವುದು ಬೇಡ ಎಂದು ಮತ ಚಲಾಯಿಸಿದವರು ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ವಿಭಜಿಸಿ ಉಡುಪಿಯಲ್ಲಿ ಪ್ರತ್ಯೇಕ ಡಿಸಿಸಿ ಬ್ಯಾಂಕನ್ನು ಸ್ಥಾಪಿಸಿದಲ್ಲಿ ಎರಡೂ ಬ್ಯಾಂಕುಗಳು ದುರ್ಬಲಗೊಳ್ಳುತ್ತವೆಂದು ಮತ್ತು ಬಂಡವಾಳ ಕೊರತೆಯಿಂದ ಸಹಕಾರ ಸಂಘಗಳ ಅಭಿವೃದ್ಧಿಗೆ ಸಾಕಷ್ಟು ಸಾಲ ನೀಡಲು ಸಾಧ್ಯವಾಗುವುದಿಲ್ಲವೆಂದು ಅಭಿಪ್ರಾಯಪಟ್ಟು ಎರಡೂ ಜಿಲ್ಲೆಗಳಿಗೆ ಒಂದೇ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು ಕಾರ್ಯನಿರ್ವಹಿಸುವುದು ಉತ್ತಮ ಎಂದು ಅಭಿಪ್ರಾಯಪಟ್ಟಿದ್ದಾರೆ. ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ವಿಭಜಿಸಿ ಉಡುಪಿಯಲ್ಲಿ ಪ್ರತ್ಯೇಕ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಸ್ಥಾಪನೆ ಮಾಡಿದರೆ ಹೊಸದಾಗಿ ಪ್ರಾರಂಭಿಸಲಾದ ಬ್ಯಾಂಕು ಯಶಸ್ವಿಯಾಗಿ ನಡೆಯುವ ಸಾಧ್ಯತೆ ಇದ್ದು ಯಾವುದೇ ತೊಂದರೆಯಾಗಲಾರದು ಎಂಬುದು ಉಡುಪಿಗೆ ಪ್ರತ್ಯೇಕ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಸ್ಥಾಪಿಸಬೇಕೆನ್ನುವವರ ಅಭಿಪ್ರಾಯವಾಗಿರುತ್ತದೆ. ಆದರೆ ಉಡುಪಿಯಲ್ಲಿ ಪ್ರತ್ಯೇಕ ಜಿಲ್ಲಾ ಕೆಂದ್ರ ಸಹಕಾರ ಬ್ಯಾಂಕು ಸ್ಥಾಪನೆಯಾದಲ್ಲಿ ಹಾಲಿ ಇರುವ ದಕ್ಷಿಣ ಕನ್ನಡ ಡಿಸಿಸಿ ಬ್ಯಾಂಕು ದುರ್ಬಲಗೊಳ್ಳುತ್ತದೆ ಎಂಬ ಬಗ್ಗೆಯಾಗಲೀ ಹೊಸದಾಗಿ ಉಡುಪಿ ಡಿಸಿಸಿ ಬ್ಯಾಂಕು ಆರ್ಥಿಕ ಸದೃಢತೆಯಿಂದ ನಡೆಯುವ ಸಾಧ್ಯತೆ ಇಲ್ಲ ಎಂಬ ಬಗ್ಗೆಯಾಗಲೀ ಯಾವುದೇ ಚರ್ಚೆಯಾಗಿ ನಿರ್ಣಯಿಸಿರುವುದು ಕಂಡುಬರುವುದಿಲ್ಲ.

ರಾಜ್ಯದ ಸರ್ವಾಂಗೀಣ ಅಭಿವೃದ್ಧಿಗೆ ಜಿಲ್ಲೆಗಳನ್ನು ರಚಿಸಿ ಪ್ರತಿ ಜಿಲ್ಲೆಯನ್ನೂ ಅಭಿವೃದ್ಧಿ ಘಟಕವನ್ನಾಗಿ ಪರಿಗಣಿಸಲಾಗಿರುತ್ತದೆ. ಪ್ರತಿ ಜಿಲ್ಲೆಯಲ್ಲಿಯೂ ಆರ್ಥಿಕ ಸದೃಢತೆಯಿಂದ ನಡೆಯುವ ಡಿಸಿಸಿ ಬ್ಯಾಂಕು ಇರಬೇಕೆನ್ನುವುದು ರಾಜ್ಯ ಸರ್ಕಾರದ ನಿಲುವಾಗಿರುತ್ತದೆ ಮತ್ತು ರಾಜ್ಯ ಸರ್ಕಾರವು ಜಿಲ್ಲೆಗಳಲ್ಲಿ ತೆಗೆದುಕೊಳ್ಳುವ ಅಭಿವೃದ್ಧಿ ಕಾರ್ಯಕ್ರಮಗಳ ಸಮರ್ಪಕ ಅನುಷ್ಠಾನವನ್ನು ಭದ್ರಪಡಿಸುವ ದೃಷ್ಟಿಯಿಂದ ಉಡುಪಿಯಲ್ಲಿ ಪ್ರತ್ಯೇಕ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಸ್ಥಾಪಿಸುವುದು ತನ್ಮೂಲಕ ಉಡುಪಿ ಜಿಲ್ಲೆಯಲ್ಲಿರುವ ಸಹಕಾರ ಸಂಘಗಳ ಮತ್ತು ಅವುಗಳ ಸದಸ್ಯರುಗಳ ಹಿತವನ್ನು ಕಾಪಾಡುವುದು ಅಗತ್ಯವಾಗಿರುತ್ತದೆ. ಅಲ್ಲದೇ ಹಾಲಿಯಿರುವ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ವಿಭಜಿಸಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು (residual bank) ಮತ್ತು ಉಡುಪಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು ಎಂದು ಎರಡು ಬ್ಯಾಂಕುಗಳನ್ನು ಸ್ಥಾಪಿಸಿದಲ್ಲಿ ಎರಡು ಬ್ಯಾಂಕುಗಳೂ ಆರ್ಥಿಕ ಸದೃಢತೆಯಿಂದ ನಡೆಯುವ ಸಾಧ್ಯತೆಯಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಮಹಾಸಭೆಯು ದಿನಾಂಕ:01.12.2008 ರಂದು ತೆಗೆದುಕೊಂಡಿರುವ ನಿರ್ಣಯವು ಎರಡೂ ಜಿಲ್ಲೆಗಳ ಸಹಕಾರ ಸಂಘಗಳ ಮತ್ತು ಅವುಗಳ ಸದಸ್ಯರ ಹಿತದೃಷ್ಟಿಗೆ ಧಕ್ಕೆ ತರುವಂತದ್ದಾಗಿರುತ್ತದೆ.

1998 ರಿಂದಲೂ ಉಡುಪಿ ಜಿಲ್ಲೆಯಲ್ಲಿ ಪ್ರತ್ಯೇಕ ಡಿಸಿಸಿ ಬ್ಯಾಂಕನ್ನು ಸ್ಥಾಪಿಸುವ ಬಗ್ಗೆ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು ತನ್ನ ವಾರ್ಷಿಕ ಮಹಾಸಭೆಯಲ್ಲಿ ಮಂಡಿಸುವುದರ ಹೊರತಾಗಿ ಯಾವುದೇ ಕ್ರಮಕೈಗೊಂಡಿರುವುದಿಲ್ಲ.

ಉಡುಪಿ ಜಿಲ್ಲೆಯ ಸರ್ವಾಂಗೀಣ ಅಭಿವೃದ್ಧಿಯ ದೃಷ್ಟಿಯಿಂದ, ಅದರಲ್ಲಿನ ಸಹಕಾರ ಸಂಘಗಳ ಮತ್ತು ಅವುಗಳ ಸದಸ್ಯರ ಹಿತದೃಷ್ಟಿಯಿಂದ ಹಾಗೂ ಒಟ್ಟಾರೆ ಸಾರ್ವಜನಿಕ ಹಿತದೃಷ್ಟಿಯಿಂದ ಹಾಲಿ ಇರುವ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ

ಸಹಕಾರ ಬ್ಯಾಂಕನ್ನು ವಿಭಜಿಸಿ ಉಡುಪಿಯಲ್ಲಿ ಉಡುಪಿ ಜಿಲ್ಲೆಗೆ ಪ್ರತ್ಯೇಕ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಸ್ಥಾಪಿಸುವುದು ಅಗತ್ಯ ಎಂದು ಸರ್ಕಾರವು ಮನಗಂಡಿರುತ್ತದೆ.

ಆದುದರಿಂದ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 254 ಸಿಆರ್‌ಸಿ 2008, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮತ್ತು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30ಬಿ(1)ರ ಅಡಿಯಲ್ಲಿ ಸರ್ಕಾರಕ್ಕೆ ದತ್ತವಾದ ಅಧಿಕಾರವನ್ನು ಚಲಾಯಿಸಿ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಆಡಳಿತ ಸಮಿತಿ ಮತ್ತು ವ್ಯವಸ್ಥಾಪಕ ನಿರ್ದೇಶಕರಿಗೆ ಕೆಳಕಂಡ ನಿರ್ದೇಶನಗಳನ್ನು ನೀಡುತ್ತದೆ.

1) ಹಾಲಿ ಇರುವ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ವಿಭಜಿಸಿ ಮಂಗಳೂರು ಕೇಂದ್ರ ಸ್ಥಳವನ್ನಾಗಿ ಉಳ್ಳ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು (residual bank) ಮತ್ತು ಉಡುಪಿ ಕೇಂದ್ರ ಸ್ಥಳವನ್ನಾಗಿ ಉಳ್ಳ ಉಡುಪಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳನ್ನು ಸ್ಥಾಪಿಸತಕ್ಕದ್ದು.
2) ಪ್ರಸ್ತಾಪಿತ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಆಯಾಯ ಜಿಲ್ಲೆಗಳ ಸಹಕಾರ ಸಂಘಗಳು ಸಂಯೋಜಿಸಲ್ಪಡತಕ್ಕದ್ದು. ಆಯಾಯ ಜಿಲ್ಲೆಗಳಲ್ಲಿನ ಸಹಕಾರ ಸಂಘಗಳ ಲೆಕ್ಕಪತ್ರಗಳನ್ನು ಮತ್ತು ಖಾತೆಗಳನ್ನು ಆಯಾಯ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ವರ್ಗಾಯಿಸತಕ್ಕದ್ದು.
3) ಪ್ರಸ್ತಾಪಿತ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು (residual bank) ಮತ್ತು ಉಡುಪಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಆಸ್ತಿ–ಹೊಣೆಗಳನ್ನು ಪ್ರತ್ಯೇಕಿಸಿ ದಿನಾಂಕ: 31.03.2009 ರಲ್ಲಿದ್ದಂತೆ ಪ್ರತ್ಯೇಕ ಹಣಕಾಸು ತಃಖ್ತೆಗಳನ್ನು ತಯಾರಿಸತಕ್ಕದ್ದು. ಮತ್ತು ಹಾಗೆ ತಯಾರಿಸಿದ ಹಣಕಾಸು ತಃಖ್ತೆಗಳಿಗೆ ಸಹಕಾರ ಸಂಘಗಳ ನಿಬಂಧಕರ ಅನುಮೋದನೆ ಪಡೆಯತಕ್ಕದ್ದು. ಅನುಮೋದಿತ ಆಸ್ತಿ–ಹೊಣೆ ತಃಖ್ತೆಗಳ ಪ್ರಕಾರ ಎರಡೂ ಬ್ಯಾಂಕುಗಳಿಗೆ ಆಸ್ತಿ ಮತ್ತು ಹೊಣೆಗಳನ್ನು ವರ್ಗಾವಣೆ ಮಾಡತಕ್ಕದ್ದು. ಆಸ್ತಿ–ಹೊಣೆಗಳ ಹಂಚಿಕೆ ಮತ್ತು ವರ್ಗಾವಣೆಯಲ್ಲಿ ಯಾವುದೇ ವಿವಾದ ಉಂಟಾದಲ್ಲಿ ಆ ಬಗ್ಗೆ ಸಹಕಾರ ಸಂಘಗಳ ನಿಬಂಧಕರ ತೀರ್ಮಾನವೇ ಅಂತಿಮವಾಗಿರತಕ್ಕದ್ದು.
4) ದಿನಾಂಕ: 31.03.2009 ರಲ್ಲಿದ್ದಂತೆ ಆಸ್ತಿ–ಹೊಣೆ ತಃಖ್ತೆಗಳನ್ನು ಸಕ್ಷಮ ಲೆಕ್ಕಪರಿಶೋಧಕರಿಂದ ದೃಢೀಕರಿಸತಕ್ಕದ್ದು. ಹಾಗೆ ದೃಢೀಕರಣ ಆದಾಗ ಅಂಕಿ–ಅಂಶಗಳಲ್ಲಿ ವ್ಯತ್ಯಾಸ ಉಂಟಾದಲ್ಲಿ ತತ್ಪರಿಣಾಮದ ಹೊಂದಾಣಿಕೆ ನಮೂದುಗಳನ್ನು ಎರಡೂ ಬ್ಯಾಂಕುಗಳ ಹಂತದಲ್ಲಿ ಮಾಡತಕ್ಕದ್ದು.
5) ಹಾಲಿ ಇರುವ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ನಬಾರ್ಡ್ ಮೂಲಕ ಭಾರತೀಯ ರಿಸರ್ವ್ ಬ್ಯಾಂಕಿನ ಅನುಮತಿಗಾಗಿ ಪ್ರಸ್ತಾವ ಸಲ್ಲಿಸತಕ್ಕದ್ದು.
6) ಪ್ರಸ್ತಾಪಿತ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು ಮತ್ತು ಉಡುಪಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ದಿನಾಂಕ:01.04.2009 ರಿಂದ ಅಥವಾ ಭಾರತೀಯ ರಿಸರ್ವ್ ಬ್ಯಾಂಕಿನ ಅನುಮೋದನೆ ಆದ ದಿನಾಂಕದಿಂದ ಇವೆರಡರಲ್ಲಿ ಯಾವುದು ಕೊನೆಯದೋ ಆ ದಿನಾಂಕದಿಂದ ಪ್ರತ್ಯೇಕವಾಗಿ ಕಾರ್ಯನಿರ್ವಹಿಸತಕ್ಕದ್ದು.
7) ಹಾಲಿ ಇರುವ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನಲ್ಲಿ ಕೆಲಸ ನಿರ್ವಹಿಸುತ್ತಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರಿಗೆ ಅವರವರ ಇಚ್ಛಾನುಸಾರ ಹೊಸ ಡಿಸಿಸಿ ಬ್ಯಾಂಕುಗಳಲ್ಲಿ ಸೇವೆ ಸಲ್ಲಿಸಲು ಅವಕಾಶ ಕಲ್ಪಿಸತಕ್ಕದ್ದು. ಹಾಗೆ ಮಾಡಿದಾಗ ಅವರ ಸೇವಾ ಭದ್ರತೆ ಮತ್ತು ಇತರ ಸವಲತ್ತುಗಳನ್ನು ಮುಂದುವರಿಸತಕ್ಕದ್ದು.
8) ಹಾಲಿ ಇರುವ ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಈ ನಿರ್ದೇಶನಗಳನ್ನು ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು.
9) ಸಹಕಾರ ಸಂಘಗಳ ನಿಬಂಧಕರು/ ಲೆಕ್ಕಪರಿಶೋಧನಾ ನಿರ್ದೇಶಕರು ಈ ನಿರ್ದೇಶನಗಳನ್ನು ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 506

ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಶ್ರೀ ಡಿ.ಬಿ. ನಾಯಕ್, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್, ಬೆಳಗಾಂ ಇವರ ವಿರುದ್ಧ ದಾಖಲಾದ ದಾಳಿ ಪ್ರಕರಣ ಮತ್ತು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ

**ಓದಲಾಗಿದೆ** 1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಪತ್ರ ಸಂ:ಲೋಕ್:ಐಎನ್‌ವಿ(ಜಿ): ಬಿಡಿ–59 ಮೊ.ಸಂ 27/2008 ದಿ:23.9.2008.

2) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಪತ್ರ ಸಂ:ಲೋಕ್ :ಐಎನ್‌ವಿ (ಜಿ): ಬಿಡಿ–59 ಮೊ.ಸಂ.27/2008 ದಿ:3.10.2008.

**ಪ್ರಸ್ತಾವನೆ:**

ಶ್ರೀ ಡಿ.ಬಿ. ನಾಯಕ್ ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್, ಬೆಳಗಾಂ, ಬೆಳಗಾಂ ಜಿಲ್ಲೆ ಇವರು ತಮ್ಮ ಬಲ್ಲ ಮೂಲಗಳಿಗಿಂತ ಅಪಾರ ಪ್ರಮಾಣದ ಅಧಿಕ ಆಸ್ತಿಯನ್ನು ಹೊಂದಿದ್ದಾರೆಂದು ತಿಳಿದು ಬಂದ ಹಿನ್ನೆಲೆಯಲ್ಲಿ ಲೋಕಾಯುಕ್ತ ಪೊಲೀಸರು ಇವರ ವಿರುದ್ಧ ಬೆಂಗಳೂರು ಗ್ರಾಮಾಂತರ ಜಿಲ್ಲೆ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂ:27/2008 ಅನ್ನು ದಾಖಲಿಸಿಕೊಂಡು ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ 1988ರ ಕಲಂ 13(1)(ಇ) ಹಾಗೂ 13(2) ರಡಿ ಶ್ರೀ ಡಿ.ಬಿ. ನಾಯಕ್ ಕೆ.ಎ.ಎಸ್. ಇವರ ಮನೆ ಮತ್ತು ಕಛೇರಿಗಳ ಮೇಲೆ ದಿ:11.9.2008 ರಂದು ದಾಳಿ ನಡೆಸಿ ಇವರ ವಿರುದ್ಧ ಪ್ರಕರಣ ದಾಖಲಿಸಿಕೊಂಡಿರುವುದಾಗಿ ಮೇಲೆ ಓದಲಾದ ಕ್ರಮ ಸಂ(1)ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರು ವರದಿ ಮಾಡಿರುತ್ತಾರೆ. ಸದರಿ ವರದಿಯಲ್ಲಿ ಶ್ರೀ ಡಿ.ಬಿ. ನಾಯಕ್ ಕೆ.ಎ.ಎಸ್. ಇವರು ತಮ್ಮ ಬಲ್ಲ ಮೂಲಗಳಿಗಿಂತ ಸುಮಾರು ರೂ. 80,00,000 ಗಳಷ್ಟು ಅಧಿಕ ಮೊತ್ತದ ಆಸ್ತಿ ಪಾಸ್ತಿ ಗಳಿಸಿ ಸುಮಾರು ಶೇಕಡ 260 ರಷ್ಟು ಅಧಿಕ ಆದಾಯವನ್ನು ಹೊಂದಿರುತ್ತಾರೆ ಎಂದು ವರದಿ ಮಾಡಿರುತ್ತಾರೆ. ಇದರಿಂದಾಗಿ ಸದರಿಯವರ ಮೇಲೆ ಕಲಂ 13(1)(ಇ) ಜೊತೆಗೆ 13(2) ಪಿ.ಸಿ. ಕಾಯ್ದೆ 1988ರಂತೆ ಮೊಕದ್ದಮೆ ದಾಖಲು ಮಾಡಿ ಪ್ರಥಮ ವರ್ತಮಾನ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಮತ್ತು ಮೇಲಾಧಿಕಾರಿಗಳಿಗೂ ನಿವೇದಿಸಿರುವುದಾಗಿ ತಿಳಿಸಿರುತ್ತಾರೆ. ಅದರಂತೆ ದಿ:19.9.08 ರಂದು ಆಪಾದಿತರನ್ನು ಹೆಚ್ಚಿನ ತನಿಖೆಗಾಗಿ ನ್ಯಾಯಾಲಯದ ಸನ್ನಿಧಿಗೆ ಹಾಜರುಪಡಿಸಿ ದಿ:20.9.08 ರವರೆಗೆ ಪೊಲೀಸ್ ಬಂಧನಕ್ಕೆ ಪಡೆಯಲಾಗಿದ್ದು, ಮತ್ತೆ ಮುಂದುವರೆದ ಹೆಚ್ಚಿನ ತನಿಖೆಗಾಗಿ ನ್ಯಾಯಾಲಯಕ್ಕೆ ದಿ:20–9–08 ರಂದು ವರದಿಯನ್ನು ಸಲ್ಲಿಸಿಕೊಂಡು ಮತ್ತೆ ಹೆಚ್ಚಿನ ತನಿಖೆಗಾಗಿ ದಿ:22–9–08 ರ ಸಂಜೆ 5.00 ಗಂಟೆಯವರೆಗೆ ಪೊಲೀಸ್ ಬಂಧನಕ್ಕೆ ಪಡೆಯಲಾಗಿತ್ತೆಂದು, ತನಿಖೆ ನಂತರ ದಿ:22–9–08 ರಂದು ನ್ಯಾಯಾಲಯಕ್ಕೆ ಹಾಜರುಪಡಿಸಿ ನ್ಯಾಯಾಂಗ ಬಂಧನಕ್ಕೆ ಕೋರಲಾಗಿ ನ್ಯಾಯಾಲಯವು ಆಪಾದಿತರನ್ನು ದಿ:22.9.08 ರಿಂದ 20 ದಿನಗಳ ಕಾಲ ಬೆಳಗಾಂ ಜಿಲ್ಲೆಯನ್ನು ಪ್ರವೇಶಿಸಬಾರದೆಂಬ ನಿಬಂಧನೆಗೆ ಒಳಪಟ್ಟು ಜಾಮೀನಿನ ಮೇಲೆ ಬಿಡುಗಡೆ ಮಾಡಿರುವುದಾಗಿ ತಿಳಿಸಿರುತ್ತಾರೆ.

ಆಪಾದಿತ ಅಧಿಕಾರಿ, ಶ್ರೀ ಡಿ.ಬಿ. ನಾಯಕ್, ಕೆ.ಎ.ಎಸ್ ಇವರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ ತಮ್ಮ ಪ್ರಭಾವವನ್ನು ಬೀರುವುದರ ಮೂಲಕ ಸಾಕ್ಷ್ಯಾಧಾರಗಳನ್ನು ನಾಶಪಡಿಸಿ ತನಿಖೆಗೆ ಅಡ್ಡಿ ಅಡಚಣೆ ಉಂಟು ಮಾಡುವ ಸಾಧ್ಯತೆಗಳಿರುವುದರಿಂದ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಅವರ ಸ್ಥಾನವನ್ನು ಪಲ್ಲಟಗೊಳಿಸಲು ಮೇಲೆ ಓದಲಾದ (1) ಮತ್ತು (2) ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಕೋರಿರುತ್ತಾರೆ.

ಸರ್ಕಾರವು ಕರ್ನಾಟಕ ಲೋಕಾಯುಕ್ತದ ಅಪರ ಪೊಲೀಸ್ ಮಹಾನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಆಪಾದಿತ ಅಧಿಕಾರಿಯು ತಮ್ಮ ಬಲ್ಲ ಮೂಲಗಳಿಗಿಂತ ಅಪಾರ ಪ್ರಮಾಣದ ಅಧಿಕ ಆಸ್ತಿಯನ್ನು ಹೊಂದಿದ್ದಾರೆಂದು ಹಾಗೂ ಆಪಾದಿತರನ್ನು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ದಸ್ತಗಿರಿ ಮಾಡಿ ದಿ:19.9.08 ರಿಂದ 22.9.08 ರವರೆಗೆ ಪೊಲೀಸ್ ಕಸ್ಟಡಿಯಲ್ಲಿರಿಸಲಾಗಿತ್ತೆಂದು ಕರ್ನಾಟಕ ಲೋಕಾಯುಕ್ತದ ಅಪರ ಪೊಲೀಸ್ ಮಹಾನಿರ್ದೇಶಕರು ವರದಿ ಮಾಡಿರುವ ಹಿನ್ನೆಲೆಯಲ್ಲಿ ಹಾಗೂ ಆಪಾದಿತರ ಭ್ರಷ್ಟಾಚಾರವು ಮೇಲ್ನೋಟಕ್ಕೆ ಸಾಬೀತು ಪಡುವುದರಿಂದಲೂ ಪ್ರಕರಣದ ಸುಗಮ ತನಿಖೆಗೆ ಅವಕಾಶ ಕಲ್ಪಿಸುವ ಅವಶ್ಯಕತೆಯನ್ನು ಮನಗಂಡು ಸರ್ಕಾರವು ಶ್ರೀ ಡಿ.ಬಿ. ನಾಯಕ್, ಕೆ.ಎ.ಎಸ್ ಅಧಿಕಾರಿ ಅವರನ್ನು ಮುಂದಿನ ತನಿಖೆ/ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿರಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂ:ಸಿಆಸುಇ 68 ಕೆಇವಿ 2008 ಬೆಂಗಳೂರು ದಿ:28ನೇ ಅಕ್ಟೋಬರ್ 08**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(2)(ಎ)ರ ಪ್ರಕಾರ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(aa) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಡಿ.ಬಿ. ನಾಯಕ್ ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾಂ ಜಿಲ್ಲೆ

ಇವರ ವಿರುದ್ಧ ಶಿಸ್ತು ಕ್ರಮ ವಿಚಾರಣೆಯನ್ನು ಕಾಯ್ದಿಟ್ಟು ದಿ:19.9.08 ರಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಡಿ.ಬಿ. ನಾಯಕ್, ಕೆ.ಎ.ಎಸ್. ಅಧಿಕಾರಿ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 98ರ ನಿಯಮದನ್ವಯ ಜೀವನಾಧಾರದ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಡಿ.ಬಿ. ನಾಯಕ್ ಕೆ.ಎ.ಎಸ್ ರವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1555

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–2)

**ಕಂದಾಯ ಸಚಿವಾಲಯ**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಸಂಬಂಧಿಸಿದಂತೆ 9 ಹೊಸ ಉಪ ನೋಂದಣಿ ಕಛೇರಿಗಳನ್ನು ಪ್ರಾರಂಭಿಸಲು ಸಿಬ್ಬಂದಿ ಮತ್ತು ಕಛೇರಿ ವೆಚ್ಚಕ್ಕಾಗಿ ಅನುದಾನವನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ** 1) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ:ಇಎಸ್‌ಟಿ 2–184/07–08, ದಿನಾಂಕ:18.8.2008.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:18–8–2008 ರ ಪತ್ರದಲ್ಲಿ ಈ ಕೆಳಕಂಡ ಸ್ಥಳಗಳಲ್ಲಿ ಹೊಸದಾಗಿ 9 ಉಪ ನೋಂದಣಿ ಕಛೇರಿಗಳನ್ನು ತೆರೆಯಲು ಸರ್ಕಾರದ ಆದೇಶ ಸಂಖ್ಯೆ:ಕಂಇ 11 ಮುನೋಮು 2007, ದಿನಾಂಕ:24.5.2007 ಹಾಗೂ 10.9.2007ರಲ್ಲಿ ಆದೇಶಿಸಲಾಗಿದೆ.

1) ಕಾರಟಗಿ, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ
2) ಹುಣಸಗಿ, ಗುಲ್ಬರ್ಗಾ ಜಿಲ್ಲೆ
3) ಮುಂಡಗೋಡ, ಉತ್ತರಕನ್ನಡ ಜಿಲ್ಲೆ
4) ಗುಳೇದಗುಡ್ಡ, ಬಾಗಲಕೋಟೆ ಜಿಲ್ಲೆ
5) ಲಕ್ಷ್ಮೇಶ್ವರ, ಗದಗ್ ಜಿಲ್ಲೆ
6) ಕೆರೂರು ಹೋಬಳಿ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ
7) ಗಜೇಂದ್ರಗಡ, ರೋಣಾ ತಾಲ್ಲೂಕು, ಗದಗ್ ಜಿಲ್ಲೆ
8) ಕಿತ್ತೂರು, ಬೆಳಗಾವಿ ಜಿಲ್ಲೆ
9) ಭಟ್ಕಳ, ಉತ್ತರಕನ್ನಡ ಜಿಲ್ಲೆ

ಸದರಿ ಸರ್ಕಾರಿ ಆದೇಶದಲ್ಲಿ ಬೆಳಗಾವಿ ಜಿಲ್ಲೆಯ ಕಿತ್ತೂರು ಹಾಗೂ ಉತ್ತರಕನ್ನಡ ಜಿಲ್ಲೆಯ ಭಟ್ಕಳ ಇಲ್ಲಿಗೆ ಖಾಯಂ ಸಿಬ್ಬಂದಿ ಹಾಗೂ ಅನುದಾನ ಒದಗಿಸುವುದನ್ನು ಬಾಕಿ ಇರಿಸಿ ಇಲಾಖೆಯಲ್ಲಿನ ಸಿಬ್ಬಂದಿಗಳನ್ನು ಮರುನಿಯೋಜಿಸುವ ಮೂಲಕ ಸದರಿ ಸ್ಥಳಗಳಲ್ಲಿ ಉಪ ನೋಂದಣಿ ಕಛೇರಿಗಳನ್ನು ತೆರೆಯಲು ಆದೇಶಿಸಿದೆ; ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಉಪ ನೋಂದಣಾಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ಹುದ್ದೆಗಳು ಅತಿ ಕನಿಷ್ಠ ಪ್ರಮಾಣದಲ್ಲಿದ್ದು, ಹಾಲಿ ಇರುವ ಸಿಬ್ಬಂದಿಯವರಿಂದ ಕಛೇರಿಗಳನ್ನು ಪ್ರಾರಂಭಿಸುವುದು ಕಷ್ಟಸಾಧ್ಯವಾಗಿರುತ್ತದೆ; ಆದ್ದರಿಂದ, ಪ್ರಸ್ತುತ ಸರ್ಕಾರದ ತಾತ್ವಿಕ ಮಂಜೂರಾತಿ ನೀಡಿರುವ 9 ಸ್ಥಳಗಳಲ್ಲಿ ಹೊಸ ಉಪ ನೋಂದಣಿ ಕಛೇರಿಗಳನ್ನು ಸ್ಥಾಪಿಸಲು ಅಗತ್ಯ ಸಿಬ್ಬಂದಿ ವರ್ಗದವರನ್ನು ಮತ್ತು ಅನುದಾನವನ್ನು ನೀಡುವುದು ಅತ್ಯವಶ್ಯಕವಾಗಿರುವುದರಿಂದ ಹುದ್ದೆಗಳ ಸೃಜನೆ ಮತ್ತು ಸಿಬ್ಬಂದಿ ವೆಚ್ಚ ಒಳಗೊಂಡಂತೆ ರೂ. 79,04,160/–ಗಳ ಅನುದಾನವನ್ನು ಆದಷ್ಟು ಬೇಗ ಮಂಜೂರು ಮಾಡುವಂತೆ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ಕೋರಿರುತ್ತಾರೆ.

ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಹೊಸದಾಗಿ ಪ್ರಾರಂಭಿಸಲಿರುವ 9 ಉಪ ನೋಂದಣಿ ಕಛೇರಿಗಳ ನಿರ್ವಹಣಾ ವೆಚ್ಚಕ್ಕಾಗಿ ರೂ. 79,04,160/– ಅನುದಾನ ಒದಗಿಸಲು ಪ್ರಸ್ತಾಪಿಸಲಾಗಿದ್ದು, ಅದರಲ್ಲಿ ರೂ. 57.26 ಲಕ್ಷವನ್ನು ಸಿಬ್ಬಂದಿ ವೆಚ್ಚಕ್ಕಾಗಿ ಕೋರಲಾಗಿದ್ದು, ಸಿಬ್ಬಂದಿಯನ್ನು ಮರುಹೊಂದಾಣಿಕೆ ಮೂಲಕ ಭರ್ತಿ ಮಾಡಲು ತಿಳಿಸಿರುವ ಹಿನ್ನೆಲೆಯಲ್ಲಿ ಸಿಬ್ಬಂದಿ ವೇತನವನ್ನು ಈಗಾಗಲೇ ಆಯವ್ಯಯದಲ್ಲಿ ಒದಗಿಸಿದ ಅನುದಾನದಲ್ಲಿ ಮರುಹೊಂದಾಣಿಕೆ ಮಾಡಿ ಭರಿಸಿಕೊಳ್ಳುವಂತೆ ತಿಳಿಸಲು ನಿರ್ಧರಿಸಲಾಗಿದೆ. ಇನ್ನು ಕಛೇರಿ ವೆಚ್ಚಕ್ಕಾಗಿ ರೂ. 21.78 ಲಕ್ಷ ಕೋರಿದ್ದು, 12 ತಿಂಗಳಿಗೆ ಲೆಕ್ಕ ಹಾಕಲಾಗಿದ್ದು, ಈಗಾಗಲೇ 7 ತಿಂಗಳು ಕಳೆದಿರುವುದರಿಂದ ಬಾಕಿ

ಇರುವ 5 ತಿಂಗಳಿಗೆ ರೂ 8.75 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಮಾತ್ರ ಮುಂದಿನ ಪೂರಕ ಅಂದಾಜು–2 ರಲ್ಲಿ ಸೇರಿಸಿ ಒದಗಿಸಲಾಗುವುದೆಂದು ನಿರ್ಧರಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 11 ಮುನೋಮು 2007, ಬೆಂಗಳೂರು, ದಿನಾಂಕ:25ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಹೊಸದಾಗಿ ಉಪ ನೋಂದಣಿ ಕಛೇರಿಗಳನ್ನು ಪ್ರಾರಂಭಿಸಲು ಅಗತ್ಯವಿರುವ ಸಿಬ್ಬಂದಿಯನ್ನು ಮರುಹೊಂದಾಣಿಕೆ ಮೂಲಕ ಭರ್ತಿ ಮಾಡಲು ತಿಳಿಸಿರುವುದರಿಂದ, ಸಿಬ್ಬಂದಿ ವೇತನವನ್ನು ಈಗಾಗಲೇ ಆಯವ್ಯಯದಲ್ಲಿ ಒದಗಿಸಿದ ಅನುದಾನದಲ್ಲಿ ಮರುಹೊಂದಾಣಿಕೆ ಮಾಡಿ ಭರಿಸಿಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕಛೇರಿ ವೆಚ್ಚಕ್ಕಾಗಿ ರೂ. 21.78 ಲಕ್ಷ (ಇಪ್ಪತ್ತೊಂದು ಲಕ್ಷದ ಎಪ್ಪತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ಕೋರಿದ್ದು, 12 ತಿಂಗಳಲ್ಲಿ ಈಗಾಗಲೇ 7 ತಿಂಗಳು ಕಳೆದಿರುವುದರಿಂದ ಬಾಕಿ ಇರುವ 5 ತಿಂಗಳಿಗೆ ರೂ. 8.75 ಲಕ್ಷಗಳ (ಎಂಟು ಲಕ್ಷದ ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಹೆಚ್ಚುವರಿ ಅನುದಾನವನ್ನು ಮಾತ್ರ ಮುಂದಿನ ಪೂರಕ ಅಂದಾಜು–2 ರಲ್ಲಿ ಸೇರಿಸಿ ಒದಗಿಸಲಾಗುವುದೆಂದು ತಿಳಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 1167 ವೆಚ್ಚ–7/2008, ದಿನಾಂಕ:22.11.2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 210

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಜಾಗೃತ ದಳವನ್ನು ಸೃಷ್ಟಿಸುವ ಕುರಿತು.

**ಓದಲಾಗಿದೆ** 1) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ:ಸಿಬ್ಬಂದಿ 1–40/2006–07, ದಿನಾಂಕ:11.8.2008.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:11.8.2008ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಬ್ಯಾಂಕುಗಳು ಮತ್ತು ಇತರೆ ವಿತ್ತ ಸಂಸ್ಥೆಗಳು ನೀಡುವ ಸಾಲದ ಮೇಲೆ ಸರಿಯಾದ ಮುದ್ರಾಂಕ ಶುಲ್ಕವನ್ನು ಸಂಬಂಧಿಸಿದ ಸಾಲ ನೀಡುವ ಸಂಸ್ಥೆಗಳು ವಸೂಲು ಮಾಡಿ ಸರ್ಕಾರಕ್ಕೆ ತುಂಬುತ್ತಿದ್ದಾರೆಯೇ? ಎಂದು ಪ್ರತಿ ಹಂತದಲ್ಲಿ ಪರಿಶೀಲಿಸುವ ಅವಶ್ಯಕತೆಯನ್ನು ಮನಗೊಂಡು ಸರ್ಕಾರದ ಆದೇಶ ಸಂಖ್ಯೆ:ಕಂಇ 9 ಮುನೋಸೇ (1) 2004, ದಿನಾಂಕ:6.11.2004 ರಲ್ಲಿ ನೋಂದಣಿ ಉಪ ಮಹಾಪರಿವೀಕ್ಷಕರು (ಗುಪ್ತ ವಾರ್ತೆಗಳು ಮತ್ತು ಜಾಗೃತದಳ) ಹುದ್ದೆಯನ್ನು ಸೃಜಿಸಿ ಈ ಹುದ್ದೆಯನ್ನು ಐಎಎಸ್/ಐಆರ್‌ಎಸ್/ಐಎ & ಎಎಸ್ ವೃಂದದ ಹಿರಿಯ ಅಧಿಕಾರಿಗಳಿಂದ ಭರ್ತಿ ಮಾಡತಕ್ಕದ್ದೆಂದು ಆದೇಶಿಸಲಾಗಿದೆ. ಆದರೆ ಈವರೆವಿಗೂ ಸದರಿ ಹುದ್ದೆಯನ್ನು ಭರ್ತಿ ಮಾಡಿರುವುದಿಲ್ಲ, ಸದರಿ ಹುದ್ದೆಗೆ ಪೂರಕವಾಗಿ ಕೆಲಸ ಮಾಡಲು ಅನೇಕ ವೃಂದದ ಹೊಸ ಹುದ್ದೆಗಳನ್ನು ಸೃಜಿಸುವ ಕುರಿತಂತೆ ಶಿಫಾರಸ್ಸು ಮಾಡಿದ್ದು, ಬದಲಾದ ಹಿನ್ನೆಲೆಯಲ್ಲಿ ಹುದ್ದೆಗಳ ಸೃಜನೆ ಕುರಿತಂತೆ ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ ಹಾಗೂ ಜೊತೆಗೆ 8 ವಾಹನಗಳನ್ನು ಖರೀದಿಸಲು ಮಂಜೂರಾತಿ ಹಾಗೂ ಅಗತ್ಯ ಅನುದಾನವನ್ನು ಸಹ ನೀಡುವಂತೆ ಕೋರಲಾಗಿದೆ.

ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಜಾಗೃತದಳವನ್ನು ಸ್ಥಾಪಿಸಲು ಉಪ ನೋಂದಣಿ ಮಹಾಪರಿವೀಕ್ಷಕರು (ಗುಪ್ತ ವಾರ್ತೆಗಳು ಮತ್ತು ಜಾಗೃತದಳ) ಹುದ್ದೆಯ ಜೊತೆಗೆ ಪೂರಕವಾಗಿ ಕೆಲಸ ನಿರ್ವಹಿಸಲು ಹೊಸ ಹುದ್ದೆಗಳನ್ನು ಸೃಜಿಸುವುದು ಅವಶ್ಯಕವಾಗಿದೆ ಎಂದು ತಿಳಿಸಿದ್ದು, ಹುದ್ದೆಗಳ ವಿವರಗಳು ಈ ಕೆಳಕಂಡಂತಿವೆ:

| | | |
|---|---|---|
| 1 | ಉಪ ನೋಂದಣಿ ಮಹಾಪರಿವೀಕ್ಷಕರು (ಪ್ರತಿ ವಿಭಾಗಕ್ಕೆ ಒಬ್ಬರಂತೆ) | 04 ಹುದ್ದೆಗಳು |
| 2 | ಕೇಂದ್ರಸ್ಥಾನ ಸಹಾಯಕರು | 04 ಹುದ್ದೆಗಳು |
| 3 | ಹಿರಿಯ ಉಪ ನೋಂದಣಾಧಿಕಾರಿಗಳು (ಅಧೀಕ್ಷಕರು) (ಪ್ರತಿ ವಿಭಾಗಕ್ಕೆ ಒಬ್ಬರು ಮತ್ತು ಕೇಂದ್ರ ಕಛೇರಿಯಲ್ಲಿ ಮಾನಿಟರ್ ಮಾಡಲು ಇಬ್ಬರು) | 06 ಹುದ್ದೆಗಳು |
| 4 | ಉಪ ನೋಂದಣಾಧಿಕಾರಿಗಳು (ಗ್ರೂಪ್ ಸಿ) (ಪ್ರತಿ ವಿಭಾಗದಲ್ಲಿ ತಪಾಸಣೆ ಮಾಡಲು ಒಂದು ವಿಭಾಗಕ್ಕೆ 5 ಉಪ ನೋಂದಣಾಧಿಕಾರಿಗಳಂತೆ) | 20 ಹುದ್ದೆಗಳು |
| 5 | ಪ್ರಥಮ ದರ್ಜೆ ಸಹಾಯಕರು (ಗ್ರೂಪ್ ಸಿ) (ಪ್ರತಿ ವಿಭಾಗದಲ್ಲಿ ತಪಾಸಣೆ ಮಾಡಲು ಒಂದು ವಿಭಾಗಕ್ಕೆ 5 ಪ್ರಥಮ ದರ್ಜೆ ಸಹಾಯಕರುಗಳಂತೆ) | 20 ಹುದ್ದೆಗಳು |
| 6 | ಬೆರಳಚ್ಚುಗಾರರು (ಪ್ರತಿ ವಿಭಾಗಕ್ಕೆ ಇಬ್ಬರಂತೆ) | 08 ಹುದ್ದೆಗಳು |

| | | |
|---|---|---|
| 7 | ವಾಹನ ಚಾಲಕರು | 08 ಹುದ್ದೆಗಳು |
| 8 | ಗ್ರೂಪ್ ಡಿ | 04 ಹುದ್ದೆಗಳು |
| | ಒಟ್ಟು | 74 ಹುದ್ದೆಗಳು |

ಈ ಹುದ್ದೆಗಳ ಸೃಜನೆಯಿಂದ ವೇತನ ಭತ್ಯೆಗಳಿಗಾಗಿ ಒಟ್ಟಾರೆ ವಾರ್ಷಿಕ 125.00 ಲಕ್ಷಗಳ ಆರ್ಥಿಕ ಖರ್ಚು ಬೀಳಲಿದೆ.

ಪರಿಷ್ಕೃತ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಈ ಮೇಲ್ಕಂಡ ಹುದ್ದೆಗಳನ್ನು ಮಂಜೂರು ಮಾಡಿ ಶೀಘ್ರ ಭರ್ತಿ ಮಾಡುವುದರಿಂದ, ತಪಾಸಣಾ ತಂಡವು ಆರ್ಥಿಕ ಸಂಸ್ಥೆಗಳ ತಪಾಸಣೆಯನ್ನು ಕನಿಷ್ಟ 5 ವರ್ಷಗಳ ಹಿಂದಿನ ಅವಧಿಯಿಂದ ಈ ತನಕ ತಪಾಸಣೆ ಮಾಡಿದಲ್ಲಿ ಪ್ರತಿ ವರ್ಷಕ್ಕೆ ಕನಿಷ್ಟ 100 ಕೋಟಿ ರೂಪಾಯಿಗಳ ರಾಜಸ್ವ ಸಂಗ್ರಹಣೆ ಆಗುವುದರಲ್ಲಿ ಸಂದೇಹವಿಲ್ಲವೆಂದು ತಿಳಿಸಲಾಗಿದೆ ಮತ್ತು ಇಲಾಖೆಯಲ್ಲಿ ಸಿಬ್ಬಂದಿ ಕೊರತೆಯಿಂದ ರಾಜ್ಯದ ಬಹುತೇಕ ಉಪ ನೋಂದಣಿ ಕಛೇರಿಗಳ ನಿಯತಕಾಲಿಕ ತಪಾಸಣೆ ಸಹ ಮಾಡಲು ಸಾಧ್ಯವಾಗದೇ ಇರುವುದರಿಂದ, ಉಪ ನೋಂದಣಾಧಿಕಾರಿಗಳು ನೋಂದಣಿ ಕ್ರಿಯೆಯಲ್ಲಿ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿರುವ ಪ್ರಕರಣಗಳನ್ನು ಪತ್ತೆ ಹಚ್ಚಲು ಸಾಧ್ಯವಾಗುತ್ತಿಲ್ಲ. ತಪಾಸಣಾ ತಂಡವು ಪ್ರತಿ ಉಪ ನೋಂದಣಿ ಕಛೇರಿಗಳನ್ನು ಅಮೂಲಾಗ್ರವಾಗಿ ತಪಾಸಣೆ ಮಾಡುವುದರಿಂದ ರಾಜಸ್ವದ ಸೋರುವಿಕೆಯನ್ನು ಯಶಸ್ವಿಯಾಗಿ ತಡೆಗಟ್ಟುವುದೂ ಅಲ್ಲದೇ ಹೆಚ್ಚಿನ ರಾಜಸ್ವ ಸಂಗ್ರಹಣೆಗೆ ಅತ್ಯಂತ ಅನುಕೂಲವಾಗ ಬಹುದಾಗಿದೆ. ಆದ್ದರಿಂದ ಪ್ರಸ್ತಾಪಿಸಿರುವಂತೆ 2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಜಾಗೃತದಳ ಸೃಜನೆಯ ಬಗ್ಗೆ ಸರ್ಕಾರವು ಘೋಷಣೆ ಮಾಡಿರುವುದರಿಂದ, ಜಾಗೃತದಳವನ್ನು ಆದಷ್ಟು ಬೇಗ ಸೃಜಿಸುವಂತೆ ಮತ್ತು ಹುದ್ದೆಗಳನ್ನು ಭರ್ತಿ ಮಾಡುವಂತೆ ಕೋರಿರುತ್ತಾರೆ.

ಆಯವ್ಯಯ ಭಾಷಣದಲ್ಲಿ ಸರ್ಕಾರವು ಘೋಷಣೆ ಮಾಡಿರುವಂತೆ ನೋಂದಣಿ ಮತ್ತು ಮುದ್ರಾಂಕಗಳ ಇಲಾಖೆಯಲ್ಲಿ ಜಾಗೃತ ದಳ ಸೃಷ್ಟಿಸಲು 74 ಹೊಸ ಹುದ್ದೆಗಳನ್ನು ಸೃಜಿಸಲು ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಲಾಯಿತು 2007–08ನೇ ಸಾಲಿನಲ್ಲಿ 3630.74 ಕೋಟಿ ರೂಪಾಯಿಗಳ ರಾಜಸ್ವ ವಸೂಲಾಗಿದ್ದು, ಇದರ ಪೈಕಿ ಬೆಂಗಳೂರು ನಗರ ಜಿಲ್ಲೆಯಲ್ಲಿ 2408.75 ಕೋಟಿ ರೂಪಾಯಿಗಳು ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 238.76 ಕೋಟಿ ರೂಪಾಯಿಗಳು ಅಂದರೆ ಶೇ. 73 ರಷ್ಟು ಹಣ ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳಿಂದ ವಸೂಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಪ್ರಸ್ತಾಪಿಸಿರುವಂತೆ ಪ್ರತಿ ಕಂದಾಯ ವಿಭಾಗಕ್ಕೆ ಒಂದರಂತೆ ಉಪ ನೋಂದಣಿ ಮಹಾಪರಿವೀಕ್ಷಕರ ಹುದ್ದೆಯ ಜೊತೆಯಲ್ಲಿ ಇತರ ಹುದ್ದೆಗಳನ್ನು ಸೃಜನೆ ಮಾಡುವುದು ಅಷ್ಟೊಂದು ಸೂಕ್ತವಲ್ಲವೆಂದು ಸರ್ಕಾರವು ಅಭಿಪ್ರಾಯ ಪಡಲಾಗಿದೆ. ಆದ್ದರಿಂದ ಬೆಂಗಳೂರು ಕೇಂದ್ರ ವಿಭಾಗದಲ್ಲಿ ಒಂದು ಉಪ ನೋಂದಣಿ ಮಹಾಪರಿವೀಕ್ಷಕರು ಹಾಗೂ ಇತರ 13 ಪೂರಕಸಿಬ್ಬಂದಿಯೊಂದಿಗೆ ಹುದ್ದೆಗಳನ್ನು ಸೃಜಿಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 55 ಮುನೋಸೇ (1) 2008, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಜಾಗೃತದಳ ಸೃಷ್ಟಿಸಿ ಈ ಕೆಳಕಂಡ 14 ಹುದ್ದೆಗಳನ್ನು ಸೃಜಿಸಲಾಗಿದೆ.

| | | |
|---|---|---|
| 1 | ಉಪ ನೋಂದಣಿ ಮಹಾಪರಿವೀಕ್ಷಕರು | 01 ಹುದ್ದೆ |
| 2 | ಕೇಂದ್ರಸ್ಥಾನ ಸಹಾಯಕರು | 01 ಹುದ್ದೆ |
| 3 | ಹಿರಿಯ ಉಪ ನೋಂದಣಾಧಿಕಾರಿಗಳು (ಅಧೀಕ್ಷಕರು) | 02 ಹುದ್ದೆಗಳು |
| 4 | ಉಪ ನೋಂದಣಾಧಿಕಾರಿಗಳು (ಗ್ರೂಪ್ ಸಿ) | 03 ಹುದ್ದೆಗಳು |
| 5 | ಪ್ರಥಮ ದರ್ಜೆ ಸಹಾಯಕರು (ಗ್ರೂಪ್ ಸಿ) | 02 ಹುದ್ದೆಗಳು |
| 6 | ಡಾಟಾ ಎಂಟ್ರಿ ಆಪರೇಟರುಗಳು | 02 ಹುದ್ದೆಗಳು |
| 7 | ವಾಹನ ಚಾಲಕರು | 1 ಹುದ್ದೆ |
| 8 | ಗ್ರೂಪ್ ಡಿ | 02 ಹುದ್ದೆಗಳು |
| | ಒಟ್ಟು | 14 ಹುದ್ದೆಗಳು |

ಜಾಗೃತದಳಕ್ಕೆ ಲಭ್ಯವಿರುವ ದಾಖಲೆಗಳನ್ನು ಆಧರಿಸಿ, ಸಂಬಂಧಿಸಿದ ದಾಖಲೆ/ಪತ್ರಗಳನ್ನು ತರಿಸಿಕೊಳ್ಳುವ ಮತ್ತು ಶಿಕ್ಷೆಯ ಪ್ರಮಾಣ ನಿಗದಿಪಡಿಸುವ/ವಿಧಿಸುವ ಶಿಫಾರಸ್ಸು ಮಾಡುವ ಅಧಿಕಾರವನ್ನು ಮಾತ್ರ ನೀಡಲಾಗಿದ್ದು, ಶೋಧನೆ ಮಾಡುವ ಹಾಗೂ ಜಪ್ತಿ ಮಾಡುವ ಅಧಿಕಾರವನ್ನು ನೀಡಿರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 1175 ವೆಚ್ಚ–7/2008, ದಿನಾಂಕ:24.11.2008ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 212

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ನೋಂದಣಿ ಮತ್ತು ಮುದ್ರಾಂಕ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾಕ್ಕೆ 2008–09ನೇ ಸಾಲಿಗೆ ಎರಡನೇ ಕಂತಿನ ರೂ. 1405.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** 1) ಸರ್ಕಾರದ ಆದೇಶ ಸಂಖ್ಯೆ:ಯೋಇ 21 ಹೈಕಮಂ 2008 ದಿನಾಂಕ:24.9.2008 .

2) ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ. ಹೈಕಪ್ರಮಂ/ಹಕಾನಿ/ಲೆವಿ–1/ಅನುದಾನ/2008–09/1105 ದಿನಾಂಕ:23.10.08.

**ಪ್ರಸ್ತಾವನೆ:**

2008–09ನೇ ಸಾಲಿಗೆ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಆಯವ್ಯಯದ ಲೆಕ್ಕಶೀರ್ಷಿಕೆ "2515–00–800–0–01–101 (ಸಹಾಯಾನುದಾನ)(ಯೋಜನೆ)" ಅಡಿಯಲ್ಲಿ ರೂ. 3210.00 ಲಕ್ಷಗಳು ಮತ್ತು ಲೆಕ್ಕಶೀರ್ಷಿಕೆ "2515–00–800–0–01–436 (ನಬಾರ್ಡ್)(ಯೋಜನೆ)" ಅಡಿಯಲ್ಲಿ ರೂ. 310.00 ಲಕ್ಷಗಳ ಒಟ್ಟು ಅನುದಾನ ರೂ. 3520.00 ಲಕ್ಷಗಳನ್ನು ಒದಗಿಸಿದೆ.

ಮೇಲೆ ಓದಲಾದ ಸರ್ಕಾರಿ ಆದೇಶ (1)ರಲ್ಲಿ ಮೊದಲನೇ ಕಂತಾಗಿ ರೂ. 200.00 ಲಕ್ಷಗಳನ್ನು ದಿನಾಂಕ:24.9.2008ರಲ್ಲಿ ಬಿಡುಗಡೆ ಮಾಡಲಾಗಿದೆ. ಮತ್ತು (2)ರ ಪತ್ರದಲ್ಲಿ ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾರವರು 2008–09ನೇ ಸಾಲಿನ ಮಂಡಳಿ ಹಾಗೂ ನಬಾರ್ಡ್ ಕಾಮಗಾರಿಗಳ ಮತ್ತು ಮುಂದುವರಿದ ಕಾಮಗಾರಿಗಳ ಬಿಲ್ಲುಗಳನ್ನು ಪಾವತಿ ಮಾಡಲು ಹಾಗೂ ವಿವಿಧ ಅನುಷ್ಠಾನಾಧಿಕಾರಿಗಳಿಗೆ ಬಿಲ್ಲು ಪಾವತಿ ಮಾಡಲು ರೂ. 1560.00 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿರುವುದರಿಂದ ಈಗ ಎರಡನೇ ಕಂತಾಗಿ ರೂ. 1405.00 ಲಕ್ಷ ಅನುದಾನವನ್ನು ಲೆಕ್ಕಶೀರ್ಷಿಕೆ "2515–00–800–0–01–101 (ಸಹಾಯಾನುದಾನ) (ಯೋಜನೆ)ಅಡಿಯಲ್ಲಿ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಯೋಇ 21 ಹೈಕಮಂ 2008, ಬೆಂಗಳೂರು, ದಿನಾಂಕ:12ನೇ ಡಿಸೆಂಬರ್ 2008**

ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ 2008–09ನೇ ಸಾಲಿಗೆ ಅನುದಾನದ ಎರಡನೇ ಕಂತಾಗಿ ರೂ. 1405.00 ಲಕ್ಷಗಳನ್ನು (ಹದಿನಾಲ್ಕು ಕೋಟಿ ಐದು ಲಕ್ಷ ರೂ.ಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ಬಿಡುಗಡೆ ಮಾಡಿದ ಮೊತ್ತವನ್ನು ಮಂಡಳಿಯ ಖಜಾನೆಯ ವೈಯಕ್ತಿಕ ಖಾತೆಗೆ ಮೊದಲು ಇಟ್ಟು ನಂತರ ಮಂಜೂರಾದ ಕಾರ್ಯಕ್ರಮಗಳ ಪ್ರಗತಿಗೆ ಅನುಗುಣವಾಗಿ ನಿಯಮಾನುಸಾರ ಖರ್ಚು ಮಾಡಲು ತಿಳಿಸಲಾಗಿದೆ. 2008–09ನೇ ಸಾಲಿನಲ್ಲಿ ನಿಯಮಾನುಸಾರ ಹಣ ಉಪಯೋಗಿಸಿ ಬಳಕೆ ಪ್ರಮಾಣ ಪತ್ರವನ್ನು ಮಂಡಳಿಯ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸುವುದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2515–00–800–0–01–101 (ಸಹಾಯಾನುದಾನ) (ಯೋಜನೆ)" ಅಡಿಯಲ್ಲಿ ರೂ. 1405.00 ಲಕ್ಷಗಳನ್ನು ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ:16.5.2008ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ನೀಡಲಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 104

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ವಾಣಿಜ್ಯ ಶಿಕ್ಷಣದ ಶಾಲೆಗಳಲ್ಲಿ ಬೋಧನೆ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ** 1) ಸಾರ್ವಜನಿಕ ಶಿಕ್ಷಣ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ:ವಾ.ಶಿ1/ವಾ.ಶಿ.ಬೋ.ಶು. ಇತರೆ. ಶುಲ್ಕ ಹೆ/12/2004–05, ದಿನಾಂಕ:12.6.2008.

ಪ್ರಸ್ತಾವನೆ:

ಮೇಲೆ ಓದಲಾದ ಸಾರ್ವಜನಿಕ ಶಿಕ್ಷಣ ಆಯುಕ್ತರ ಕಛೇರಿಯಿಂದ ಸ್ವೀಕರಿಸಲಾದ ದಿನಾಂಕ:12.6.2008ರ ಪತ್ರದಲ್ಲಿ ಕರ್ನಾಟಕ ರಾಜ್ಯ ವಾಣಿಜ್ಯ ವಿದ್ಯಾಶಾಲೆಗಳ ಸಂಘ ಬೆಂಗಳೂರು, ಇವರ ಬೇಡಿಕೆಯನ್ನು ಪರಿಗಣಿಸಿ, ವಾಣಿಜ್ಯ ಶಿಕ್ಷಣ ಶಾಲೆಗಳ ಮಾಸಿಕ ಮತ್ತು ಇತರೆ ಶುಲ್ಕಗಳು ಹಾಗೂ ಪರೀಕ್ಷೆಗಳಿಗೆ ಸಂಬಂಧಿಸಿದ ಇತರೆ ಶುಲ್ಕಗಳನ್ನು ಪರಿಷ್ಕರಿಸಿ ಹೆಚ್ಚಿಸುವ ಬಗ್ಗೆ ಶಿಫಾರಸ್ಸಿನೊಂದಿಗೆ ಸರ್ಕಾರದ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಬೋಧನೆ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಪರಿಷ್ಕರಿಸುವ ವಿವರಗಳು ಈ ಕೆಳಕಂಡಂತಿವೆ.

| ಕ್ರ. ಸಂ | ವಿಷಯ | ದರ್ಜೆ | ಪ್ರಸುತ ದರ | ಶಾಲಾ ಸಂಘದ ಬೇಡಿಕೆ | ಪರಿಷ್ಕರಿಸಲು ಇಲಾಖೆಯಿಂದ ಶಿಫಾರಸ್ಸು ಮಾಡಿರುವ ದರ |
|---|---|---|---|---|---|
| 1 | ಅರ್ಜಿಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 20–00 | 50–00 | 30–00 |
| 2 | ದಾಖಲಾತಿ ಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 20–00 | 50–00 | 30–00 |
| 3 | ವಾಚನಾಲಯ ಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 20–00 | 50–00 | 30–00 |
| 4 | ದಂಡ ಶುಲ್ಕ | ಎಲ್ಲಾ ದರ್ಜೆ | 10–00 | 20–00 | 10–00 (ದಿ:11 ರಿಂದ 15 ರವರೆಗೆ) 15–00 (ದಿ:16 ರಿಂದ 31 ರವರೆಗೆ) |
| 5 | ಮಾಸಿಕ ಶುಲ್ಕ ಎಲ್ಲಾ ವಿಷಯಗಳು | ಪ್ರಥಮ<br>ಮಧ್ಯಮ<br>ಪ್ರೌಢ<br>ಪ್ರವೀಣ | 75–00<br>85–00<br>85–00<br>95–00 | 125–00<br>140–00<br>140–00<br>150–00 | 100–00<br>110–00<br>110–00<br>130–00 |
| | **ಪರೀಕ್ಷೆಗಳಿಗೆ ಸಂಬಂಧಿಸಿದ ಇತರೆ ಶುಲ್ಕಗಳು** | | | | |
| 6 | ಮೆಕಾನಿಸಂ ಶುಲ್ಕ ಬೆರಳಚ್ಚು ವಿಷಯಗಳಿಗೆ ಮಾತ್ರ | ಪ್ರಥಮ<br>ಪ್ರೌಢ<br>ಪ್ರವೀಣ | 50–00<br>60–00<br>70–00 | 75–00<br>100–00<br>120–00 | 65–00<br>75–00<br>85–00 |
| 7 | ಬೆರಳಚ್ಚು ಯಂತ್ರದ ಬಾಡಿಗೆ (ಎಲ್ಲಾ ದರ್ಜೆಗಳಿಗೆ) | ಎಲ್ಲಾ ದರ್ಜೆ | 50–00 | 75–00 | 65–00 |
| 8 | ಪೀಠೋಪಕರಣಗಳ ಬಾಡಿಗೆ (ಬೆರಳಚ್ಚು ಪರೀಕ್ಷೆಗಳಿಗೆ ಮಾತ್ರ) | ಎಲ್ಲಾ ದರ್ಜೆ | 25–00 | 50–00 | 40–00 |
| 9 | ಸಾಗಾಣಿಕೆ ವೆಚ್ಚ (ಬೆರಳಚ್ಚು ಪರೀಕ್ಷೆಯ ಎಲ್ಲಾ ವಿಷಯಗಳಿಗೆ) | ಎಲ್ಲಾ ದರ್ಜೆ | 15–00 | 30–00 | 25–00 |

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ವಾಣಿಜ್ಯ ಶಾಲೆಗಳಲ್ಲಿನ ಬೋಧನಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಪುನರ್ ವಿಮರ್ಶಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 54 ಎಲ್‌ಸಿಇ 2008, ಬೆಂಗಳೂರು, ದಿನಾಂಕ:31ನೇ ಡಿಸೆಂಬರ್ 2008**

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ವಾಣಿಜ್ಯ ಶಿಕ್ಷಣ ಶಾಲೆಗಳಲ್ಲಿ ಬೋಧನೆ ಮತ್ತು ಇತರೆ ಶುಲ್ಕಗಳನ್ನು ಸಾರ್ವಜನಿಕ ಶಿಕ್ಷಣ ಆಯುಕ್ತರು ಶಿಫಾರಸ್ಸು ಮಾಡಿ ಸಲ್ಲಿಸಿದಂತೆ ಕೆಳಕಂಡಂತೆ ಪರಿಷ್ಕರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಆದೇಶಿಸಲಾಗಿದೆ.

**ವಾಣಿಜ್ಯ ಶಿಕ್ಷಣ ಶಾಲೆಗಳ ಮಾಸಿಕ ಮತ್ತು ಇತರೆ ಶುಲ್ಕಗಳ ಪರಿಷ್ಕರಿಸಿದ ದರಗಳು**

| ಕ್ರ. ಸಂ | ವಿಷಯ | ದರ್ಜೆ | ಪ್ರಸ್ತುತ ದರ (ರೂ.ಗಳಲ್ಲಿ) | ಪರಿಷ್ಕರಿಸಿದ ದರ (ರೂ.ಗಳಲ್ಲಿ) |
|---|---|---|---|---|
| 1 | ಅರ್ಜಿಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 20–00 | 30–00 |
| 2 | ದಾಖಲಾತಿ ಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 20–00 | 30–00 |
| 3 | ವಾಚನಾಲಯ ಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 20–00 | 30–00 |
| 4 | ದಂಡ ಶುಲ್ಕ | ಎಲ್ಲಾ ದರ್ಜೆ | 10–00 | 10–00 (ದಿ:11 ರಿಂದ 15 ರವರೆಗೆ)<br>15–00 (ದಿ:16 ರಿಂದ 31 ರವರೆಗೆ) |
| 5 | ಮಾಸಿಕ ಶುಲ್ಕ ಎಲ್ಲಾ ವಿಷಯಗಳು | ಪ್ರಥಮ<br>ಮಧ್ಯಮ<br>ಪ್ರೌಢ<br>ಪ್ರವೀಣ | 75–00<br>85–00<br>85–00<br>95–00 | 100–00<br>110–00<br>110–00<br>130–00 |
| | **ಪರೀಕ್ಷೆಗಳಿಗೆ ಸಂಬಂಧಿಸಿದ ಇತರೆ ಶುಲ್ಕಗಳು** | | | |
| 6 | ಮೆಕಾನಿಸಂ ಶುಲ್ಕ ಬೆರಳಚ್ಚು ವಿಷಯಗಳಿಗೆ ಮಾತ್ರ | ಪ್ರಥಮ<br>ಪ್ರೌಢ<br>ಪ್ರವೀಣ | 50–00<br>60–00<br>70–00 | 65–00<br>75–00<br>85–00 |
| 7 | ಬೆರಳಚ್ಚು ಯಂತ್ರದ ಬಾಡಿಗೆ (ಎಲ್ಲಾ ದರ್ಜೆಗಳಿಗೆ) | ಎಲ್ಲಾ ದರ್ಜೆ | 50–00 | 65–00 |
| 8 | ಪೀಠೋಪಕರಣಗಳ ಬಾಡಿಗೆ (ಬೆರಳಚ್ಚು ಪರೀಕ್ಷೆಗಳಿಗೆ ಮಾತ್ರ) | ಎಲ್ಲಾ ದರ್ಜೆ | 25–00 | 40–00 |
| 9 | ಸಾಗಾಣಿಕೆ ವೆಚ್ಚ (ಬೆರಳಚ್ಚು ಪರೀಕ್ಷೆಯ ಎಲ್ಲಾ ವಿಷಯಗಳಿಗೆ) | ಎಲ್ಲಾ ದರ್ಜೆ | 15–00 | 25–00 |

ದಿನಾಂಕ:10–7–96ರ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಭಾವಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 204

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

**ವಿಷಯ:** ಸರ್ಕಾರಿ ಪ್ರೌಢಶಾಲೆಗಳಲ್ಲಿ ನೇರ ನೇಮಕಾತಿಯಲ್ಲಿ ಭರ್ತಿ ಮಾಡಲು ಖಾಲಿಯಿರುವ ಸಹಶಿಕ್ಷಕರು ಗ್ರೇಡ್–2 ಹುದ್ದೆಗಳಲ್ಲಿ ಅತಿಥಿ ಶಿಕ್ಷಕರನ್ನು ಗೌರವಧನ ಆಧಾರದ ಮೇರೆಗೆ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ** 1) ಆಯುಕ್ತರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ದಿನಾಂಕ:14.11.2008ರ ಪತ್ರ ಸಂಖ್ಯೆ:ಸಿ4(1)ಪ್ರೌಶಿ ಅ.ಶಿ/08–09.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:14.11.2008ರ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಸರ್ಕಾರಿ ಪ್ರೌಢ ಶಾಲೆಗಳಲ್ಲಿ ನೇಮಕಾತಿಯಿಂದ ಭರ್ತಿಮಾಡಬೇಕಾದ 2766 ಸಹ ಶಿಕ್ಷಕರು ಗ್ರೇಡ್–2 ಹುದ್ದೆಗಳು ಹಾಗೂ ದೈಹಿಕ ಶಿಕ್ಷಕರ ಗ್ರೇಡ್–1 ಹುದ್ದೆಗಳು ಖಾಲಿ ಇದ್ದು, ಅವುಗಳನ್ನು ಭರ್ತಿ ಮಾಡಲು ಸರ್ಕಾರದ ಅನುಮತಿ ನೀಡುವ ಬಗ್ಗೆ ಪರಿಶೀಲಿಸಲಾಗುತ್ತಿದೆ. ಸದರಿ ಹುದ್ದೆಗಳ ನೇಮಕಾತಿಗೆ ಸರ್ಕಾರದ ಅನುಮತಿ ದೊರೆತು, ಶಿಕ್ಷಕರ ನೇಮಕಾತಿಯ ಅಧಿಸೂಚನೆಯನ್ನು ನೀಡಿ, ನೇಮಕಾತಿ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ಸಾಕಷ್ಟು ಸಮಯ ಬೇಕಾಗುತ್ತದೆ. ಆದರೆ ಪ್ರಸಕ್ತ ಸಾಲಿನ ಶೈಕ್ಷಣಿಕ ವರ್ಷವು ಅಂತ್ಯಗೊಳ್ಳುತ್ತಿದ್ದು, ಪರೀಕ್ಷೆಗಳು ಸಮೀಪಿಸುತ್ತಿದ್ದು, ಪಾಠ, ಪ್ರವಚನಗಳು ಸಕಾಲದಲ್ಲಿ ಪೂರ್ಣಗೊಳ್ಳಬೇಕಾಗಿದೆ. ವಿದ್ಯಾರ್ಥಿಗಳ

ಹಿತ ದೃಷ್ಟಿಯಿಂದ ಮತ್ತು ಉತ್ತಮ ಶಿಕ್ಷಣ ನೀಡುವ ಅನಿವಾರ್ಯತೆ ಇರುವುದರಿಂದ ಸದರಿ ಹುದ್ದೆಗಳನ್ನು ನೇರ ನೇಮಕಾತಿಯನ್ವಯ ಭರ್ತಿ ಮಾಡುವವರೆಗೆ ಅಥವಾ 2008–09ನೇ ಸಾಲಿನ ಶೈಕ್ಷಣಿಕ ವರ್ಷವು ಅಂತ್ಯವಾಗುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕೆಲವೊಂದು ಷರತ್ತುಗಳೊಂದಿಗೆ ಆ ಹುದ್ದೆಗಳಲ್ಲಿ ತಾತ್ಕಾಲಿಕವಾಗಿ ಗೌರವಧನದ ಆಧಾರದ ಮೇರೆಗೆ ಅತಿಥಿ ಶಿಕ್ಷಕರುಗಳನ್ನು ನೇಮಕ ಮಾಡಿಕೊಳ್ಳಲು ಸಂಬಂಧಿಸಿದ ನೇಮಕಾತಿ ಪ್ರಾಧಿಕಾರವಾದ ಉಪ ನಿರ್ದೇಶಕರು, ಇವರುಗಳಿಗೆ ಅನುಮೋದನೆ ನೀಡಿ ಆದೇಶ ಹೊರಡಿಸುವಂತೆ ನಿರ್ದೇಶಕರು (ಪ್ರೌಢ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ, ಅವರು ಕೋರಿರುವರು.

2. ನಿರ್ದೇಶಕರು (ಪ್ರೌಢ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ ಅವರು ಸಲ್ಲಿಸಿದ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಸಹ ಶಿಕ್ಷಕರು ಗ್ರೇಡ್–2 ಹುದ್ದೆಗಳ ಕೊರತೆಯನ್ನು ಮನಗಂಡು ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ತಾತ್ಕಾಲಿಕವಾಗಿ ಅತಿಥಿ ಶಿಕ್ಷಕರನ್ನು ನೇಮಕ ಮಾಡುವ ಕುರಿತು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 690 ಎಲ್‌ಬಿಪಿ 2008, ಬೆಂಗಳೂರು ದಿನಾಂಕ:26ನೇ ಡಿಸೆಂಬರ್ 2008**

3. ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ,. ಸರ್ಕಾರಿ ಪ್ರೌಢ ಶಾಲೆಗಳಲ್ಲಿ ನೇರನೇಮಕಾತಿ ಮೂಲಕ ಭರ್ತಿ ಮಾಡಲು ಖಾಲಿ ಇರುವ ಸಹ ಶಿಕ್ಷಕರು ಗ್ರೇಡ್–2 ಹುದ್ದೆಗಳಲ್ಲಿ 2500 ಹುದ್ದೆಗಳಿಗೆ ಮಾತ್ರ ಅತಿಥಿ ಶಿಕ್ಷಕರನ್ನು, ಸದರಿ ಹುದ್ದೆಗಳಿಗೆ ಖಾಯಂ ಶಿಕ್ಷಕರ ನೇಮಕಾತಿ ಆಗುವವರೆಗೆ ಅಥವಾ 2008–09ನೇ ಸಾಲಿನ ಶೈಕ್ಷಣಿಕ ವರ್ಷದ ಅಂತ್ಯದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸಂಬಂಧಪಟ್ಟ ನೇಮಕಾತಿ ಪ್ರಾಧಿಕಾರವಾದ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಈ ಕೆಳಗಿನ ಷರತ್ತು ಮತ್ತು ನಿಬಂಧನೆಯೊಂದಿಗೆ ನೇಮಕ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಿದೆ.

**ಷರತ್ತುಗಳು**

1 ಮಂಜೂರಾದ ಹಾಗೂ ನೇರ ನೇಮಕಾತಿಯಿಂದ ಭರ್ತಿ ಮಾಡಲು ಖಾಲಿ ಇರುವ ಹುದ್ದೆಗಳಿಗೆ ಮಾತ್ರ ಅತಿಥಿ ಶಿಕ್ಷಕರನ್ನು ನೇಮಕ ಮಾಡಿಕೊಳ್ಳತಕ್ಕದ್ದು.

2 ಪ್ರತಿ ಅತಿಥಿ ಶಿಕ್ಷಕರು ನಿಗದಿಪಡಿಸಲಾದ ಬೋಧನಾ ಅವಧಿಗಳಿಗೆ ಮಾತ್ರ ಕಾರ್ಯನಿರ್ವಹಿಸತಕ್ಕದ್ದು.

3 ಈ ಅತಿಥಿ ಶಿಕ್ಷಕರ ಸೇವೆಯನ್ನು ಖಾಯಂ ಶಿಕ್ಷಕರ ನೇಮಕಾತಿ ಆಗುವವರೆಗೆ ಅಥವಾ 2008–09ನೇ ಸಾಲಿನ ಶೈಕ್ಷಣಿಕ ವರ್ಷದ ಅಂತ್ಯದೊಳಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಬಳಸಿಕೊಳ್ಳತಕ್ಕದ್ದು.

4 ಸರ್ಕಾರದ ನಿಯಮಗಳನ್ವಯ ಈ ಅವಧಿಯಲ್ಲಿ ಖಾಯಂ ಶಿಕ್ಷಕರು ನೇಮಕಾತಿ ಹೊಂದಿ ಕರ್ತವ್ಯಕ್ಕೆ ಹಾಜರಾದ ತಕ್ಷಣ ಅತಿಥಿ ಶಿಕ್ಷಕರ ಕಾರ್ಯನಿರ್ವಹಣೆಯು ತಂತಾನೆ ರದ್ದಾಗುತ್ತದೆ.

5 ಶಿಕ್ಷಕರೇ ಇಲ್ಲದಿರುವ ಸ್ಥಳದಲ್ಲಿ ಹಾಗೂ ನಿಯೋಜನೆಯಂತಹ ಬದಲಿ ವ್ಯವಸ್ಥೆ ಮಾಡಲು ಸಾಧ್ಯವಿಲ್ಲದಿರುವ ಸ್ಥಳದಲ್ಲಿ ಮಾತ್ರ ಅತಿಥಿ ಶಿಕ್ಷಕರನ್ನು ತಾತ್ಕಾಲಿಕವಾಗಿ ನೇಮಕ ಮಾಡಿಕೊಳ್ಳತಕ್ಕದ್ದು.

6 ಪ್ರತಿ ಅತಿಥಿ ಶಿಕ್ಷಕರಿಗೆ ಪ್ರತಿ ದಿನಕ್ಕೆ ರೂ. 125/–ಗಳಂತೆ ತಿಂಗಳಿಗೆ ಗರಿಷ್ಠ ರೂ. 4000–00 ಗಳಿಗೆ ಮೀರದಂತೆ ಗೌರವ ಧನ ನಿಗದಿಪಡಿಸತಕ್ಕದ್ದು.

7 ಅತಿಥಿ ಶಿಕ್ಷಕರ ಸೇವೆಯನ್ನು ಬಳಸಿಕೊಳ್ಳುವಾಗ ಅವರಿಗೆ ಸಕ್ಷಮ ಪ್ರಾಧಿಕಾರದ ಆದೇಶವಿಲ್ಲದೆ ಯಾವುದೇ ಆದೇಶವನ್ನು ನೀಡಬಾರದು. ಇವರ ಹೆಸರುಗಳನ್ನು ಖಾಯಂ ಶಿಕ್ಷಕರ ಹಾಜರಾತಿ ವಹಿಯಲ್ಲಿ ನಮೂದಿಸಬಾರದು ಗೌರವ ಧನ ವಿತರಣೆ ಮಾಡಿದ್ದಕ್ಕೆ ಅವರಿಂದ ರಸೀದಿಯನ್ನು ಪಡೆಯತಕ್ಕದ್ದು.

8 ಈ ರೀತಿ ನೇಮಕಾತಿ ಮಾಡಿಕೊಂಡ ಶಿಕ್ಷಕರಿಗೆ ಯಾವುದೇ ರೀತಿಯ ಸೇವಾ ಪ್ರಮಾಣ ಪತ್ರವನ್ನು ನೀಡುವಂತಿಲ್ಲ. ಹಾಜರಾತಿ ಪುಸ್ತಕವನ್ನು ಮುಖ್ಯಶಿಕ್ಷಕರೇ ನಿರ್ವಹಿಸತಕ್ಕದ್ದು. ಯಾವುದೇ ಕಾರಣಕ್ಕೂ ಸೇವಾ ಪುಸ್ತಕವನ್ನು ತೆರೆಯಬಾರದು. ಶೈಕ್ಷಣಿಕ ವರ್ಷದ ಅಂತ್ಯದಲ್ಲಿ ಅವರನ್ನು ಬಿಡುಗಡೆ ಮಾಡತಕ್ಕದ್ದು.

9 ಈಗಾಗಲೇ ನಿವೃತ್ತ ಶಿಕ್ಷಕರನ್ನು ನೇಮಕಾತಿ ಮಾಡಿಕೊಂಡು ಕಾರ್ಯನಿರ್ವಹಿಸುತ್ತಿದ್ದಲ್ಲಿ ಇಂತಹ ಹುದ್ದೆಗಳಿಗೆ ಅತಿಥಿ ಶಿಕ್ಷಕರನ್ನು ನೇಮಕಾತಿ ಮಾಡಿಕೊಳ್ಳಬಾರದು.

10 ಈ ರೀತಿ ನೇಮಕ ಮಾಡಲಾಗುವ ಶಿಕ್ಷಕರು ಅವರುಗಳು ಅತಿಥಿ ಶಿಕ್ಷಕರಾಗಿ ಸಲ್ಲಿಸುವ ಸೇವೆಯು ಇತರೆ ಯಾವುದೇ ಸರ್ಕಾರಿ ಸೇವಾ ಸಕ್ರಮಾತಿಗೆ ಪರಿಗಣಿಸತಕ್ಕದ್ದಲ್ಲ.

11 ಅತಿಥಿ ಶಿಕ್ಷಕರು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಪಡಿಸಿದ ವಿದ್ಯಾರ್ಹತೆ ಹೊಂದಿರಬೇಕು.

12 ಅತಿಥಿ ಶಿಕ್ಷಕರುಗಳನ್ನು ನೇಮಕಾತಿ ಪ್ರಾಧಿಕಾರವಾದ ಸಂಬಂಧಿಸಿದ ಉಪ ನಿರ್ದೇಶಕರು ನೇಮಕ ಮಾಡುವುದು

13 ಅತಿಥಿ ಶಿಕ್ಷಕರಿಗೆ ಪಾವತಿಸುವ ಗೌರವಧನವನ್ನು ಸಂಬಂಧಿಸಿದ ವೇತನ ಲೆಕ್ಕಶೀರ್ಷಿಕೆಯಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ:12.12.2008 ರ ಅನಧಿಕೃತ ಟಿಪ್ಪಣಿ ಸಂಖ್ಯೆ:ಎಫ್ ಡಿ 1218 ವೆಚ್ಚ–8/2008 ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ (ಸೇವಾ ನಿಯಮ) ಶಾಖೆಯ ದಿನಾಂಕ:11.12.2008 ರ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಿಆಸುಇ 492 ಸೇನಿಎ 2008ರಲ್ಲಿ ನೀಡಲಾದ ಅನುಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 348

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ವಿಷಯ:** ಅಕ್ಷರ ದಾಸೋಹ ಕಾರ್ಯಕ್ರಮದ ಅನುಷ್ಠಾನದ ಬಗ್ಗೆ ರಾಜ್ಯ ಮಟ್ಟದ ಚಾಲನಾ ಮತ್ತು ಪರಾಮರ್ಶೆ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ** 1) ಭಾರತ ಸರ್ಕಾರ, ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆ, ಪ್ರಾಥಮಿಕ ಶಿಕ್ಷಣ ಮತ್ತು ಲಿಟರಸಿ ಇಲಾಖೆ, ಮಧ್ಯಾಹ್ನ ಉಪಹಾರ ಯೋಜನೆ, ನವದೆಹಲಿ ಇವರ ಅಧಿಸೂಚನೆ ಸಂಖ್ಯೆ:ಎಫ್ 5–29/2004–ಇಇ5–ಎಂಡಿಎಂ ದಿನಾಂಕ:20–12–2004

2) ಸರ್ಕಾರಿ ಆದೇಶ ಸಂಖ್ಯೆ:ಇಡಿ 110 ಎಂಎಂಎಸ್ 2005 ದಿನಾಂಕ:21.9.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:20–12–2004ರ ಅಧಿಸೂಚನೆಯಲ್ಲಿ ಅಕ್ಷರ ದಾಸೋಹ ಕಾರ್ಯಕ್ರಮದ ಅನುಷ್ಠಾನ ಹಾಗೂ ಮೇಲ್ವಿಚಾರಣೆಗೆ ರಾಜ್ಯ ಮಟ್ಟದ ಸಮಿತಿಯನ್ನು ರಚಿಸುವ ಬಗ್ಗೆ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆಯು (ಡಿಪಾರ್ಟ್‌ಮೆಂಟ್ ಆಫ್ ಎಲಿಮೆಂಟರಿ ಎಜುಕೇಷನ್ ಎಂಡ್ ಲಿಟರಸಿ) National Programme of Nutritional Support to Primary Education ಅಡಿಯಲ್ಲಿ ನೀಡಿರುವ ಮಾರ್ಗಸೂಚಿಯನ್ವಯ ಮೇಲೆ ಓದಲಾದ ಕ್ರಮಾಂಕ(2) ರ ದಿನಾಂಕ:21.9.2005ರ ಸರ್ಕಾರಿ ಆದೇಶದಲ್ಲಿ ರಾಜ್ಯ ಮಟ್ಟದ ಚಾಲನಾ ಮತ್ತು ಮೇಲ್ವಿಚಾರಣೆ ಸಮಿತಿಯನ್ನು ರಚಿಸಲಾಗಿದೆ.

ಭಾರತ ಸರ್ಕಾರದ ಮಾರ್ಗಸೂಚಿಯನ್ವಯ (NP-NSPE 2006 Annexure-6, Para-3, Sub para-8) ನಾಮಕರಣ ಆಗಿರುವ ಸದಸ್ಯರುಗಳ ಅವಧಿಯು ಹಿಂದಿನ ಆದೇಶ ಹೊರಡಿಸಿದ ದಿನಾಂಕದಿಂದ 2 ವರ್ಷಕ್ಕೆ ಮುಗಿಯುವುದರಿಂದ ಹೊಸದಾಗಿ ರಾಜ್ಯ ಮಟ್ಟದ ಸಮಿತಿಯನ್ನು ಪುನರ್ ರಚಿಸಬೇಕಾಗಿರುತ್ತದೆ.

ಆದ್ದರಿಂದ ರಾಜ್ಯ ಸರ್ಕಾರವು ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಕರ್ನಾಟಕ ರಾಜ್ಯದಲ್ಲಿ ರಾಜ್ಯ ಮಟ್ಟದ ಚಾಲನಾ ಸಮಿತಿಯನ್ನು ಪುನರ್ ರಚಿಸಲು ತೀರ್ಮಾನಿಸಿ ಅದರಂತೆ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 47 ಎಂಎಂಎಸ್ 2008, ಬೆಂಗಳೂರು, ದಿನಾಂಕ:13ನೇ ಜನವರಿ 2009,**

**[ಇಡಿ 07 ಸ್ಕೀಮರ (ಯುನಿಕ್) 2008, ದಿನಾಂಕ:13–1–2009]**

National Programme of Nutritional Support to Primary Education ಅಡಿಯಲ್ಲಿ ಅಕ್ಷರ ದಾಸೋಹ ಕಾರ್ಯಕ್ರಮದ ಅನುಷ್ಠಾನದ ಬಗ್ಗೆ ರಾಜ್ಯ ಮಟ್ಟದ ಚಾಲನಾ ಮತ್ತು ಪರಾಮರ್ಶೆ ಸಮಿತಿಯನ್ನು ಕೆಳಕಂಡ ಸದಸ್ಯರನ್ನೊಳಗೊಂಡಂತೆ ಪುನರ್ ರಚಿಸಲಾಗಿದೆ.

1 ಅಪರ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ, ವಿಧಾನ ಸೌಧ, ಬೆಂಗಳೂರು–ಅಧ್ಯಕ್ಷರು

**ಸದಸ್ಯರು:**

2 ಸರ್ಕಾರದ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ), ಬಹುಮಹಡಿ ಕಟ್ಟ ಬೆಂಗಳೂರು.

3 ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು.

4 ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಯೋಜನಾ ಇಲಾಖೆ ಬಹುಮಹಡಿ ಕಟ್ಟಡ, ಬೆಂಗಳೂರು

5 ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ ಬೆಂಗಳೂರು

6 ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ವಿಕಾಸ ಸೌಧ, ಬೆಂಗಳೂರು

7 ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು

8 ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ, ವಿಕಾಸ ಸೌಧ, ಬೆಂಗಳೂರು
9 ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾ. ಬಹುಮಹಡಿ ಕಟ್ಟಡ, ಬೆಂಗಳೂರು
10 ಸೀನಿಯರ್ ರೀಜನಲ್ ಮ್ಯಾನೇಜರ್, ಭಾರತೀಯ ಆಹಾರ ನಿಗಮ, ಬೆಂಗಳೂರು
11 ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ, ಬೆಂಗಳೂರು,
12 ಶ್ರೀ ಪ್ರಕಾಶ, ನಿರ್ದೇಶಕರು, ಸಿ.ಎಫ್.ಟಿ.ಆರ್.ಐ, ಮೈಸೂರು
13 ಸಹಾಯಕ ತಾಂತ್ರಿಕ ಸಲಹೆಗಾರರು, ಆಹಾರ, ಮತ್ತು ಪೌಷ್ಠಿಕಾಂಶ ಮಂಡಳಿ, ಭಾರತ ಸರ್ಕಾರ ಕೇಂದ್ರ ಸದನ, ಕೋರಮಂಗಲ, ಬೆಂಗಳೂರು
14 ಶ್ರೀ ಮಧು ಪಂಡಿತ ದಾಸ್, ಇಸ್ಕಾನ್, ಅಕ್ಷಯ ಪಾತ್ರೆ ಯೋಜನೆ, ರಾಜಾಜಿನಗರ, ಬೆಂಗಳೂರು
15 ಶ್ರೀ ವೇದ ಝುಕಾರಿಯಾ, ಸಂಜೀವಿನಿ ಟ್ರಸ್ಟ್, ರಿಚ್‌ಮಂಡ್ ಟೌನ್, ಬೆಂಗಳೂರು
16 ಶ್ರೀಮತಿ ತೇಜಸ್ವಿನಿ ಅನಂತಕುಮಾರ್, ಪ್ರೆಸಿಡೆಂಟ್ ಮತ್ತು ಮ್ಯಾನೇಜಿಂಗ್ ಟ್ರಸ್ಟಿ, ಅದಮ್ಯ ಚೇತನ ಶ್ರೀಮ ಗಿರಿಜಾ ಶಾಸ್ತ್ರಿ, ಸಮರ್ಥ ಸಂಸ್ಥೆ, ಗವಿಪುರಂ, ಗುಟ್ಟಹಳ್ಳಿ, ಲಕ್ಷ್ಮೀಪುರ, ಹನುಮಂತ ನಗರ, ಬೆಂಗಳೂರು
17 ಶ್ರೀ ಗುರಿಕಾರ, ಅಧ್ಯಕ್ಷರು, ಕರ್ನಾಟಕ ರಾಜ್ಯ ಪ್ರಾಥಮಿಕ ಶಿಕ್ಷಕರ ಸಂಘ, ಬೆಂಗಳೂರು
18 ಶ್ರೀ ಎಸ್.ಆರ್. ವಿಶ್ವನಾಥ, ಶಾಸಕರು, ಯಲಹಂಕ ಕ್ಷೇತ್ರ, ಬೆಂಗಳೂರು
19 ಶ್ರೀ ಸಿ.ಹೆಚ್. ವಿಜಯ ಶಂಕರ್, ಲೋಕಸಭಾ ಸದಸ್ಯರು, ಮೈಸೂರು
20 ಶ್ರೀ ವಿಠಲ ಕಟಕಗೊಂಡ, ಶಾಕರು, ನಾಗಥಾನ, ಬಿಜಾಪುರ ಜಿಲ್ಲೆ,
21 ಶ್ರೀ ಅಪ್ಪಾಜಿ ಗೌಡ, ಅಧ್ಯಕ್ಷರು ಕನ್ನಡ ಕಸ್ತೂರಿ ಕಲಾ ಸಂಘ, ಬೆಂಗಳೂರು
22 ಪ್ರೊ., (ಶ್ರೀಮತಿ) ರಮಾನಾಯ್ಕ, ಕೃಷಿ ವಿಜ್ಞಾನ ವಿಶ್ವವಿದ್ಯಾಲಯ, ಧಾರವಾಡ
23 ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ರಾಯಚೂರು.
24 ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ
25 ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬಾಗಲಕೋಟೆ
26 ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಾಮರಾಜನಗರ
27 ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಜಿಲ್ಲೆ
28 ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು–ಸದಸ್ಯ ಕಾರ್ಯದರ್ಶಿಗಳು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 347

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ. (ಯೋಜನೆ)

## ಸಹಕಾರ ಸಚಿವಾಲಯ

**ವಿಷಯ:** ಜನತಾ ಪ್ರವೀಣ ಶಿಕ್ಷಣ ಸಂಸ್ಥೆ, ಪ್ರತಾಪನಗರ, ಬೀದರ್ ಸಂಸ್ಥೆಯಲ್ಲಿ ನಡೆದಿರುವ ಅಕ್ರಮಗಳ ಕಾರಣ, ಈ ಸಂಘಕ್ಕೆ ಆಡಳಿತಗಾರರನ್ನು ನೇಮಿಸುವ ಕುರಿತು.

**ಓದಲಾಗಿದೆ**
1) ಸರ್ಕಾರದ ಪತ್ರ ಸಂಖ್ಯೆ:ಇಡಿ/45/ಎಸ್‌ಓಹೆಚ್/2008, ದಿನಾಂಕ:2.4.2008ರ ಕಾರಣ ಕೇಳುವ ನೋಟೀಸ್.
2) ಜನತಾ ಪ್ರವೀಣ ಶಿಕ್ಷಣ ಸಂಸ್ಥೆ (ರಿ), ಬೀದರ್ ಇದರ ಅಧ್ಯಕ್ಷರು ನೀಡಿರುವ ಸಮಜಾಯಿಷಿ ಪತ್ರ ದಿನಾಂಕ:24.4.2008
3) ಸರ್ಕಾರದ ಪತ್ರ ಸಂಖ್ಯೆ:ಸಇ 8 ಸಸಂನೋ 2008, ದಿನಾಂಕ:10–7–2008
4) ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ರವರ ಪತ್ರ ಸಂಖ್ಯೆ:ಆರ್ ಸಿಎಸ್/ಎಡಿಎಂ/1/ಸಿಆರ್/ಸ.ನೋ/2008–09, ದಿನಾಂಕ:23.9.2008.
5) ಕಾರಣ ಕೇಳುವ ಸೂಚನಾ ಪತ್ರ ದಿನಾಂಕ:1–10–2008 .
6) ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್ ಜಿಲ್ಲೆ ಬೀದರ್ ರವರ ಪತ್ರ ಸಂಖ್ಯೆ:ಉನಿಬಿ/ವಿ8/ನೋಂದಣಿ/2008–09/948, ದಿನಾಂಕ:3.10.2008.
7) ಅಧ್ಯಕ್ಷರು, ಜನತಾ ಪ್ರವೀಣ ಶಿಕ್ಷಣ ಸಂಸ್ಥೆ, ನೌಬಾದ್, ಬೀದರ್ ರವರ ಪತ್ರ ದಿನಾಂಕ:13.10.2008.

ಪ್ರಸ್ತಾವನೆ:

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಜನತಾ ಪ್ರವೀಣ ಶಿಕ್ಷಣ ಸಂಸ್ಥೆ, ಪ್ರತಾಪನಗರ, ನೌಬಾದ್, ಬೀದರ್ ಇದರ ವತಿಯಿಂದ ಒಟ್ಟು 03 ಪದವಿ ಪೂರ್ವ ಕಾಲೇಜುಗಳು ನಡೆಯುತ್ತಿದ್ದು, ಇದರಲ್ಲಿ 2 ಅನುದಾನಿತ ಮತ್ತು 1 ಅನುದಾನ ರಹಿತ ಪದವಿ ಪೂರ್ವ ಕಾಲೇಜುಗಳಾಗಿರುತ್ತವೆ.

1 ಜನತಾ ಪ್ರವೀಣ ಸ್ವತಂತ್ರ ಪದವಿ ಪೂರ್ವ ಕಾಲೇಜು: (ಅನುದಾನಿತ) ಸಂತಪುರ, ಔರಾದ್ ತಾಲ್ಲೂಕು, ಬೀದರ್

2 ಪೂಜ್ಯ ಶಿವಲಿಂಗ ಸ್ವತಂತ್ರ ಪದವಿ ಪೂರ್ವ : (ಅನುದಾನಿತ) ಕಾಲೇಜು, ಹುಮ್ನಾಬಾದ್, ಬೀದರ್

3 ರಾಜೀವ್ ಗಾಂಧಿ ಪದವಿ ಪೂರ್ವ ಕಾಲೇಜು, ಬೀದರ್ : (ಅನುದಾನ ರಹಿತ)

ಜನತಾ ಪ್ರವೀಣ ಸ್ವತಂತ್ರ ಪದವಿ ಪೂರ್ವ ಕಾಲೇಜು, ಸಂತಪುರ, ಇಲ್ಲಿನ ಪದವಿ ಪೂರ್ವ ಕಾಲೇಜಿಗೆ ಸಂಬಂಧಿಸಿದಂತೆ, ಲೆಕ್ಕಪತ್ರಗಳ ನಿರ್ವಹಣೆ, ವೇತನ ಬಿಲ್ಲುಗಳ ನಿರ್ವಹಣೆ, ವಿದ್ಯಾರ್ಥಿ ವೇತನದ ಪಾವತಿಯನ್ನು ನಿಯಮಾನುಸಾರ ನಿರ್ವಹಿಸದೇ ಇರುವುದು ಹಾಗೂ ಇನ್ನಿತರ ನ್ಯೂನತೆಗಳು ಕಂಡುಬಂದ ಕಾರಣ, ಮೇಲೆ ಓದಲಾದ (1)ರಲ್ಲಿ ಸರ್ಕಾರವು, ಅಧ್ಯಕ್ಷರು, ಜನತಾ ಪ್ರವೀಣ ಶಿಕ್ಷಣ ಸಂಸ್ಥೆ, ನೌಬಾದ್, ಬೀದರ್‌ರವರಿಗೆ ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಿದ್ದು, ಸಂಘಗಳಲ್ಲಿನ ನ್ಯೂನತೆಗಳ ಹಿನ್ನೆಲೆಯಲ್ಲಿ ಶೈಕ್ಷಣಿಕ ಹಿತದೃಷ್ಟಿಯಿಂದ ಸಂಸ್ಥೆಯ ಆಡಳಿತ ಮಂಡಳಿಯನ್ನು ರದ್ದುಪಡಿಸಿ, ಆಡಳಿತಗಾರರನ್ನು ಏಕೆ ನೇಮಿಸಬಾರದು ಎಂಬುದಕ್ಕೆ ನೋಟೀಸ್ ಸ್ವೀಕರಿಸಿದ 15 ದಿನಗಳ ಒಳಗಾಗಿ ಸಂಸ್ಥೆಯು ಸರ್ಕಾರಕ್ಕೆ ಸೂಕ್ತ ವಿವರಣೆಯನ್ನು ಲಿಖಿತ ಹೇಳಿಕೆ ಮೂಲಕ ಸಲ್ಲಿಸುವಂತೆ ಸೂಚಿಸಲಾಗಿತ್ತು. ತಪ್ಪಿದ್ದಲ್ಲಿ ಸಂಸ್ಥೆಯ ಆಡಳಿತ ಮಂಡಳಿಯವರ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ, ನಿಯಮಾನುಸಾರ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದೆಂದು ಸಂಸ್ಥೆಗೆ ತಿಳಿಸಲಾಗಿತ್ತು.

ಮೇಲ್ಕಂಡ ಸಂಸ್ಥೆಗೆ ಸರ್ಕಾರದಿಂದ ನೀಡಲಾದ ಕಾರಣ ಕೇಳುವ ನೋಟೀಸ್‌ಗೆ ಜನತಾ ಪ್ರವೀಣ ಶಿಕ್ಷಣ ಸಂಸ್ಥೆಯ ಅಧ್ಯಕ್ಷರು ಓದಲಾದ (2)ರಲ್ಲಿ ತಮ್ಮ ಸಮಜಾಯಿಷಿಯನ್ನು ಸರ್ಕಾರಕ್ಕೆ ದಿನಾಂಕ:24.4.2008ರ ಪತ್ರದ ಮೂಲಕ ಲಿಖಿತವಾಗಿ ಸಲ್ಲಿಸಿರುತ್ತಾರೆ. ಈ ರೀತಿ ಸಂಸ್ಥೆಯ ಅಧ್ಯಕ್ಷರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ:24.4.2008ರ ಸಮಜಾಯಿಷಿಯನ್ನು ಪರಿಶೀಲಿಸಿ ಅಭಿಪ್ರಾಯವನ್ನು ನೀಡುವಂತೆ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ:10–7–2008ರಲ್ಲಿ ಪತ್ರ ಬರೆಯಲಾಗಿತ್ತು.

ಮೇಲೆ ಓದಲಾದ (4)ರಲ್ಲಿ ಸಹಕಾರ ಸಂಘಗಳ ನಿಬಂಧಕರು, ಜನತಾ ಪ್ರವೀಣ ಶಿಕ್ಷಣ ಸಂಸ್ಥೆ, ನೌಬಾದ್, ಬೀದರ್ ಇದರ ಅಧ್ಯಕ್ಷರು ನೀಡಿರುವ ದಿನಾಂಕ:24.4.2008ರ ಸಮಜಾಯಿಷಿಯ ಬಗ್ಗೆ ಸಹಕಾರ ಸಂಘಗಳ ಉಪ ನಿಬಂಧಕರು ಬೀದರ್ ರವರ ಮೂಲಕ ಪರಿಶೀಲನೆ ಮಾಡಿಸಿ, ವರದಿಯನ್ನು ಪಡೆದಿದ್ದು, ವಿದ್ಯಾ ಸಂಸ್ಥೆಗಳಲ್ಲಿ ಈ ಕೆಳಕಂಡ ನ್ಯೂನತೆಗಳು ಕಂಡುಬಂದಿರುವುದಾಗಿ ವರದಿ ಮಾಡಿ, ಜನತಾ ಪ್ರವೀಣ ಶಿಕ್ಷಣ ಸಂಸ್ಥೆಯ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಸಂಸ್ಥೆಗೆ ಆಡಳಿತಗಾರರನ್ನು ನೇಮಿಸಲು ಶಿಫಾರಸ್ಸು ಮಾಡಿರುತ್ತಾರೆ.

**ನ್ಯೂನತೆಗಳು**

"(ಅ) ಸಿಬ್ಬಂದಿ ವೇತನದಿಂದ ಭಾರತೀಯ ಜೀವವಿಮಾ ನಿಗಮ, ವೃತ್ತಿ ತೆರಿಗೆ ಮತ್ತು ಕುಟುಂಬ ಕಲ್ಯಾಣ ನಿಧಿಗಳ ಕಟಾಯಿಸಿದ ಮೊತ್ತವನ್ನು ಪ್ರಾಂಶುಪಾಲರ ಹೆಸರಿನಲ್ಲಿ ಇಟ್ಟುಕೊಂಡು ನಂತರ 2 ರಿಂದ 1 ವರ್ಷ ಅವಧಿಯಲ್ಲಿ ಸಂಸ್ಥೆಗಳಿಗೆ ವರ್ಗಾಯಿಸಿರುತ್ತಾರೆ.

(ಆ) ಎಲ್.ಐ.ಸಿ., ಪಿ.ಟಿ ಮತ್ತು ಎಫ್.ಬಿ.ಎಫ್. ಮೊತ್ತವನ್ನು ಕೆಲವು ಸಿಬ್ಬಂದಿಗಳ ವೇತನವನ್ನು ಕಟಾಯಿಸಿ, ಸದರಿ ಮೊತ್ತವನ್ನು ಅವರ ನಿಧಿಗಳಿಗೆ ತುಂಬಿರುವುದಿಲ್ಲ.

(ಇ) ಸಂಸ್ಥೆಯ ಅಧ್ಯಕ್ಷರಾದ ಶ್ರೀ ಜಯರಾಜ್ ತಂದೆ ಶಿವಲಿಂಗಯ್ಯ ಇವರು ಇಂಗ್ಲೀಷ್ ಉಪನ್ಯಾಸಕರೆಂದು ಹೇಳಿ ಮಾರ್ಚ್ 1993 ರಿಂದ ಮೇ 1993 ರಲ್ಲಿ ಸಂಬಳ ಪಡೆದಿರುತ್ತಾರೆ. ಸಂಸ್ಥೆಯ ಅಧ್ಯಕ್ಷರು ಸಿಬ್ಬಂದಿ ಎಂದು ಹೇಳಿ ಸಂಬಳ ಪಡೆದು ಸರ್ಕಾರಕ್ಕೆ ದ್ರೋಹ ಮಾಡಿರುವುದಾಗಿ ವರದಿ ಮಾಡಿರುತ್ತಾರೆ.

(ಈ) ಸದರಿ ಕಾಲೇಜಿನಲ್ಲಿ ಈ ಮೊದಲು ಕೆಲಸ ಮಾಡುತ್ತಿದ್ದು, ಅನುದಾನಕ್ಕೆ ಈ ಕಾಲೇಜು ಅರ್ಹರಾದ ನಂತರ ಮೊದಲು ಕೆಲಸ ಮಾಡುತ್ತಿದ್ದವರನ್ನು ತೆಗೆದುಹಾಕಿ ಬೇರೆಯವರನ್ನು ನೇಮಕಾತಿ ಮಾಡಿಕೊಂಡಿರುತ್ತಾರೆ. ಈ ವಿಷಯದ ಬಗ್ಗೆ ಸಂಸ್ಥೆಯವರನ್ನು ವಿಚಾರಿಸಿದಾಗ ಸಿಬ್ಬಂದಿಯವರು ತಾವಾಗಿಯೇ ಬಿಟ್ಟು ಹೋಗಿರುತ್ತಾರೆಂದು ತಿಳಿಸಿರುತ್ತಾರೆ. ಪರಿಶೀಲನೆಗಾಗಿ ದಾಖಲಾತಿಗಳನ್ನು ಕೋರಿದಾಗ ಆಡಳಿತ ಮಂಡಳಿಯವರು ನೀಡಿರುವುದಿಲ್ಲ

(ಉ) ಇದಲ್ಲದೆ ಆಯುಕ್ತರು ಪದವಿ ಪೂರ್ವ ಶಿಕ್ಷಣ ಇಲಾಖೆ ರವರು ಸದರಿ ಆಡಳಿತ ಮಂಡಳಿಯನ್ನು ಅಮಾನತ್ತಿನಲ್ಲಿರಿಸಿ ಆಡಳಿತಗಾರರನ್ನು ನೇಮಿಸುವಂತೆ ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗ ರವರಿಗೆ ದಿ:26.4.2008 ರಂದು ಪತ್ರ ಬರೆದಿರುತ್ತಾರೆ.

(ಊ) ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರು ಸಹ ಸಂಸ್ಥೆಯ ಅಧ್ಯಕ್ಷರು ಕಾಲೇಜಿನ ಸಿಬ್ಬಂದಿವರ್ಗದವರಿಗೆ ಕಿರುಕುಳ ನೀಡುತ್ತಿರುವುದರಿಂದ ಏಕೆ ಆಡಳಿತಗಾರರನ್ನು ನೇಮಕ ಮಾಡಬಾರದು ಎಂಬ ಬಗ್ಗೆ ವಿವರಣೆ ಸಲ್ಲಿಸಲು ಕೆಲವು ನೋಟೀಸ್‌ನ್ನು ನೀಡಿರುತ್ತಾರೆ.

(ಋ) ಜಿಲ್ಲಾಧಿಕಾರಿಗಳು ಬೀದರ್ ಜಿಲ್ಲೆ, ಇವರು ಸಹ ಸದರಿ ಕಾಲೇಜುಗಳ ಆಡಳಿತ ಮಂಡಳಿಗಳ ವಿರುದ್ಧ ಕ್ರಮ ಜರುಗಿಸಲು ಆಯುಕ್ತರು ಪದವಿ ಪೂರ್ವ ಶಿಕ್ಷಣ ಇಲಾಖೆ ಇವರಿಗೆ ದಿನಾಂಕ:2.2.2008 ರಂದು ಬರೆದಿರುತ್ತಾರೆ."

ಮೇಲ್ಕಂಡ ಪ್ರಸ್ತಾವೆಯನ್ನು ಸರ್ಕಾರ ಪರಿಶೀಲಿಸಿ, ಮೇಲಿನ ನ್ಯೂನತೆಗಳ ಬಗ್ಗೆ ಸಂಸ್ಥೆಯ ಅಧ್ಯಕ್ಷರು ಹಾಗೂ ಕಾರ್ಯದರ್ಶಿಯವರಿಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 27 ಎ ರಂತೆ ಕಾರಣ ಕೇಳುವ ಸೂಚನಾ ಪತ್ರವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ದಿನಾಂಕ:1.10.2008 ರಂದು ಹೊರಡಿಸಿದೆ. ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ ಪ್ರಕಾರ ತಮ್ಮ ಸಂಸ್ಥೆಗೆ ಆಡಳಿತಗಾರರನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ/ಮೌಖಿಕ ಹೇಳಿಕೆಯೊಂದಿಗೆ ದಿನಾಂಕ:13.10.2008ರಂದು ಅಪರಾಹ್ನ 3.00ಗಂಟೆಗೆ ಸರ್ಕಾರದ ಕಾರ್ಯದರ್ಶಿಗಳು, ಸಹಕಾರ ಇಲಾಖೆರವರನ್ನು ಖುದ್ದಾಗಿ ಭೇಟಿ ಮಾಡಲು ಜನತಾ ಪ್ರವೀಣ ಶಿಕ್ಷಣ ಸಂಸ್ಥೆ (ರಿ), ನೌಬಾದ್, ಬೀದರ್ ನ ಅಧ್ಯಕ್ಷರು ಹಾಗೂ ಕಾರ್ಯದರ್ಶಿಯವರಿಗೆ ಸೂಚಿಸಲಾಗಿತ್ತು.

ಮೇಲೆ ಓದಲಾದ (6)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್ ಜಿಲ್ಲೆ ಬೀದರ್ ರವರು ಕಾರಣ ಕೇಳುವ ಸೂಚನಾ ಪತ್ರವನ್ನು ಅಧ್ಯಕ್ಷರು ಮತ್ತು ಕಾರ್ಯದರ್ಶಿ ರವರಿಗೆ ಜಾರಿ ಮಾಡಿದ ಸ್ವೀಕೃತಿಯನ್ನು ತಮ್ಮ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಿಕೊಟ್ಟಿರುತ್ತಾರೆ.

ದಿನಾಂಕ:13.10.2008 ರಂದು ಅಪರಾಹ್ನ 3.00 ಗಂಟೆಗೆ ಸಂಸ್ಥೆಯ ಅಧ್ಯಕ್ಷರು ಹಾಗೂ ಕಾರ್ಯದರ್ಶಿಯವರು ಹಾಜರಾಗದೇ ಇವರ ಬದಲಾಗಿ ಸಂಸ್ಥೆಯ ಸಾಮಾನ್ಯ ಸದಸ್ಯರು ಮತ್ತು ಸಂಸ್ಥೆಯ ಪ್ರಾಂಶುಪಾಲರು ಅಧ್ಯಕ್ಷರು ಹಾಗೂ ಕಾರ್ಯದರ್ಶಿಯವರ ಪರವಾಗಿ ಹಾಜರಾಗಿ ಮೇಲೆ ಓದಲಾದ (7)ರ ಪತ್ರವನ್ನು ಸರ್ಕಾರಕ್ಕೆ ನೀಡಿ, ನೋಟಿಸಿನಲ್ಲಿ ಪ್ರಸ್ತಾಪಿಸಿದ 7 ಅಂಶಗಳಲ್ಲಿ 4 ಅಂಶಗಳಿಗೆ ಈಗಾಗಲೇ ದಿನಾಂಕ:24.4.2008 ರಂದು ವಿವರಣೆ ನೀಡಲಾಗಿದೆ ಎಂದು ಸದರಿ ಉತ್ತರಗಳನ್ನು ಪ್ರಾಧಿಕಾರವು ಪರಿಗಣಿಸಿರುವುದಿಲ್ಲ ಎಂದು ತಿಳಿಸಿ, ಹೊಸದಾಗಿ ಪ್ರಸ್ತಾಪಿಸಿರುವ 3 ಅಂಶಗಳಿಗೆ ಸಂಬಂಧಿಸಿದಂತೆ ಪರಿಶೀಲಿಸಿ ಉತ್ತರ ನೀಡಲು ಪ್ರಸ್ತಾಪಿಸಿರುವ ದಾಖಲೆಗಳನ್ನು ಒದಗಿಸಿದ್ದಲ್ಲಿ ಮುಂದೆ ಅದನ್ನು ಪರಿಶೀಲಿಸಿ ಉತ್ತರ ನೀಡಲು ದಿನಾಂಕ:31.12.2008ರ ವರೆಗೆ ಕಾಲಾವಕಾಶವನ್ನು ನೀಡುವಂತೆ ಕೋರಿರುತ್ತಾರೆ. ಆದರೆ ಈ ಸಂಸ್ಥೆಯ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿ ಹಾಗೂ ಖಜಾಂಚಿ ಇದ್ದರೂ ಯಾರೊಬ್ಬರೂ ಸಹ ಕಾರ್ಯದರ್ಶಿಯವರು ಕರೆದಿದ್ದ ವಿಚಾರಣೆಗೆ ಹಾಜರಾಗಿ ನ್ಯೂನತೆಗಳ ಬಗ್ಗೆ ಸಮಜಾಯಿಷಿ ನೀಡದೆ ಕೇವಲ ಒಬ್ಬ ಸಾಮಾನ್ಯ ಸದಸ್ಯ ಹಾಗೂ ಸಂಸ್ಥೆಯ ಪ್ರಾಂಶುಪಾಲರು ಮಾತ್ರ ಹಾಜರಾಗಿರುವುದು ಸಂಸ್ಥೆಯಲ್ಲಿ ನಡೆಯುತ್ತಿರುವ ಅವ್ಯವಹಾರ, ಅಧಿಕಾರ ದುರುಪಯೋಗ ಹೊಣೆಗಾರರಾಗಿರುವುದರ ಜೊತೆಗೆ ಪ್ರಸ್ತಾಪಿಸಿರುವ ಈ ಆಪಾದನೆಗಳ ಬಗ್ಗೆ ರಕ್ಷಣಾ ಹೇಳಿಕೆಯನ್ನು ನೀಡದೆ ಕೇವಲ ಉತ್ತರ ನೀಡಲು ಕಾಲಾವಕಾಶ ನೀಡುವಂತೆ ಕಾರ್ಯದರ್ಶಿಯವರ ಬಳಿ ಕೋರಿರುವುದು ಸಾಧುವಲ್ಲವೆಂದು ತಿಳಿಸಲಾಗಿದೆ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಗಮನಿಸಿದಾಗ ಜನತಾ ಪ್ರವೀಣ ಶಿಕ್ಷಣ ಸಂಸ್ಥೆ, ನೌಬಾದ್, ಬೀದರ್ ಇದರ ಅಧ್ಯಕ್ಷರಿಗೆ ಶಿಕ್ಷಣ ಸಂಸ್ಥೆಯಲ್ಲಿ ನಡೆಯುತ್ತಿರುವ ಅಧಿಕಾರ ದುರುಪಯೋಗ, ಹಣ ದುರುಪಯೋಗ, ನೌಕರರಿಗೆ ನೀಡುತ್ತಿರುವ ಕಿರುಕುಳ ಇತ್ಯಾದಿ ನ್ಯೂನತೆಗಳನ್ನು ಸರಿಪಡಿಸಿಕೊಳ್ಳಲು ಸರ್ಕಾರದ ಶಿಕ್ಷಣ ಇಲಾಖೆ, ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರು, ನೋಟೀಸುಗಳನ್ನು ನೀಡಿದ್ದರೂ ಈವರೆಗೆ ಶಿಕ್ಷಣ ಸಂಸ್ಥೆಯಲ್ಲಿನ ನ್ಯೂನತೆಗಳನ್ನು ಸರಿಪಡಿಸಲು ಆಡಳಿತ ಮಂಡಳಿಯು ಯಾವುದೇ ಕ್ರಮ ಕೈಗೊಳ್ಳದಿರುವುದನ್ನು ಪರಿಗಣಿಸಿ, ಸಂಸ್ಥೆಯಲ್ಲಿ ಬೇರು ಬಿಟ್ಟಿರುವ ಅವ್ಯವಹಾರ, ಹಣ ದುರುಪಯೋಗ ಸರ್ಕಾರದ/ಇಲಾಖೆಯ ಪೂರ್ವಾನುಮತಿ ಪಡೆಯದೆ ನೌಕರರ ವೇತನ ತಡೆ ಹಿಡಿಯುವುದು, ಅಮಾನತ್ತುಗೊಳಿಸುವುದು, ಸೇವೆಯಿಂದ ವಜಾಗೊಳಿಸುವುದು. ತಾತ್ಕಾಲಿಕ ನಿಯೋಜನೆ, ವರ್ಗಾವಣೆ ಮಾಡುವುದು, ವಾರ್ಷಿಕ ಮತ್ತು ನಿಯತಕಾಲಿಕ ಬಡ್ತಿಗಳನ್ನು ತಡೆಹಿಡಿಯುವುದು ಮುಂತಾದವುಗಳನ್ನು ಏಕಪಕ್ಷೀಯವಾಗಿ ಕೈಗೊಂಡಿರುವುದು ಹಾಗೂ ದುರಾಡಳಿತ ನಡೆಸಿರುವುದು ಮೇಲ್ನೋಟಕ್ಕೆ ಸತ್ಯವೆಂದು ಕಂಡುಬಂದಿರುವುದರಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ ರಡಿಯಲ್ಲಿ ಸಂಸ್ಥೆಗೆ ಆಡಳಿತಗಾರರನ್ನು ನೇಮಿಸುವುದು ಸೂಕ್ತವೆಂದು ಮೇಲ್ನೋಟಕ್ಕೆ ಸರ್ಕಾರಕ್ಕೆ ಕಂಡು

